# ಅಂಗಾರ

ಅರೆಭಾಷೆ ತ್ರೈಮಾಸಿಕ

ಸಂಪುಟ -1 ಸಂಚಿಕೆ - 1 ದಿನಾಂಕ : 10-9-2016 ಕೊಡಗು ರೂ. 20/-

ಕರ್ನಾಟಕ ಸರ್ಕಾರ

ಪೊಗ್ಗು - ಬೇಸ್ಯ - ಕಾರ್ತಿಂಗ



ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ



ಮೈಸೂರಿನಲ್ಲಿ 'ಅರೆಭಾಷೆ ಐಸಿರಿ' ಉದ್ಘಾಟನೆ



ಮೈಸೂರಿನಲ್ಲಿ 'ಅರೆಭಾಷೆ ಐಸಿರಿ' – ಮಾನ್ಯ ಸಂಸದ ಪ್ರತಾಪ್ ಸಿಂಹ ಅವರಿಂದ ಭಾಷಣ




ಮೈಸೂರಿನಲ್ಲಿ 'ಅರೆಭಾಷೆ ಐಸಿರಿ' – ಸಾಂಸ್ಕೃತಿಕ ಕಾರ್ಯಕ್ರಮ



# ಹಿಂಗಾರ

ಕರ್ನಾಟಕ
ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ
ಮಡಿಕೇರಿ


ಪ್ರಧಾನ ಸಂಪಾದಕರ್
ಕೊಲ್ಯದ ಗಿರೀಶ್

ಸಂಪಾದಕರ್
ಡಾ. ಪೂವಪ್ಪ ಕಣಿಯೂರು
ಮೋಹನ ಸೋನ

ವ್ಯವಸ್ಥಾಪಕ ಸಂಪಾದಕರ್
ಉಮರಬ್ಬ

**HINGARA**
A Quarterly Magazine

Vol -1, Issue - 1

Date : 10 September 2016

Page : 72

Copies : 500

RNI No. : KARARB00001

Price : Rs. 20/-

KODAGU

Cover Design : Mohana Sona



Printed by UMARABBA on behalf of Registrar, Karnataka Arebhase Samskruthi Mathu Sahithya Academy, and Published by UMARABBA on behalf of Registrar, Karnataka Arebhase Samskruthi Mathu Sahithya Academy on behalf of KARNATAKA AREBHASE SAMSKRUTHI MATHU SAHITHYA ACADEMY (Name of the Woner) and Printed at SRI KRISHNA COMPUTERS & PRINTERS, Pooja Arcade, Madikeri, Kodagu District. And Published at Karnataka Arebhase Samskruthi Mathu Sahithya Academy, Coffee Krupa Building, 1st Floor, Raja Seat Road, Madikeri, Kodagu District.
Editor : UMARABBA

www.arebhasheacademy.com. Email : arebaseacademy@gmail.com.

# ಅಧ್ಯಕ್ಷರ ನುಡಿ

ಹಿಂಗಾರದ 4ನೇ ಸಂಚಿಕೆನ ನಿಮ್ಮ ಮುಂದೆ ಇಡ್ತಾ ಒಳೋ ಹಿಂದಿನ ಸಂಚಿಕೆಗಳಿಗೆ ನೀವ್ ಕೊಟ್ಟ ಪ್ರೋತ್ಸಾಹ ಮುಂದೇನು ಇಲ್ಲಿ ಹಂಗೆ ಹಿಂಗಾರದ ಚಂದದಾರರ್ ಹೆಚ್ಚಾಗ್ತ ಇರ್ದು ಕೂಡ ಖುಷಿ ಕೊಡುವ ವಿಷ್ಯ .

ಅಕಾಡೆಮಿನ 2 ನೇ ಸಮಿತಿಯಾಗಿ ನಾವುಗ ಬಂದ ಮೇಲೆ ಅರೆಭಾಷಿಕರ್ನ ಸಂಘಟಿಸುವ ಪ್ರಯತ್ನ ಮಾಡ್ದೊ, ಹಂಗೆ ಕೊಡಗು, ಪುತ್ತೂರು, ಮೈಸೂರು, ಬೆಂಗಳೂರು, ದೆಹಲಿಲಿ ಅರೆಭಾಷೆ, ಸಂಸ್ಕೃತಿ ಮತ್ತೆ ಸಾಹಿತ್ಯ ಸಮ್ಮೇಳನಗಳ್ನ ಮಾಡಿ ಅರೆಭಾಷೆ ಬಗ್ಗೆ ಜನರ್ಲಿ ಒಲವು ಮೂಡ್ಸ್‌ತ ಒಳೊ.

ಅಕಾಡೆಮಿ ಈಗ ಸಾಹಿತ್ಯ ಕ್ಷೇತ್ರಲಿ ಕೃಷಿ ಮಾಡುವಲ್ಲಿ ಮುಖ ಮಾಡಿಟ್ಟು ಅಕಾಡೆಮಿಂದ ಈಗಾಗಲೇ ಬೇರೆ ಬೇರೆ ಪ್ರಕಾರಗಳ ಸುಮಾರ್ 10 ಪುಸ್ತಕಗಳ ಪ್ರಕಟ ಮಾಡ್ದೊ, ಅರೆಭಾಷೆ ಸಂಸ್ಕೃತಿಗೆ ಪೂರಕವಾದ ಪರಿಶಿಷ್ಟ ಜಾತಿ ಕಲಾವಿದರಾದ ಶ್ರೀ ರಾಜು ಕಳಕೇರಿ ನಿಡುಗಣೆ ಇವರ "ಕೊಡಗಿನ ಕಲಾರತ್ನ" ಪರಿಶಿಷ್ಟ ಪಂಗಡಕ್ಕೆ ಸೇರ್ದ ಶ್ರೀ ಮೇದಾರ ಅಯ್ಯಪ್ಪರವರ "ದುಡಿಮಾಂತ್ರಿಕ" ಹಂಗೆ ಶ್ರೀ ನಾರಾಯಣ ಪರವ ರವರ "ಪರಂಪರೆ ರಾಯಭಾರಿ" ಸಾಕ್ಷ್ಯಚಿತ್ರ ನಿರ್ಮಾಣ ಮಾಡಿ ಮೈಸೂರ್‌ಲಿ ನಡ್ದ ಅರೆಭಾಷೆ ಐಸಿರಿ ಕಾರ್ಯಕ್ರಮಲಿ ಸಿಡಿ ಬಿಡ್‌ಗಡೆ ಮಾಡ್ದೊ.

ಅರೆಭಾಷಿಕರ ಜೀವಾಳ, ಸಂಸ್ಕೃತಿಯ ಪ್ರತೀಕ ಆದ ಸೋಬಾನೆ ಪದಗಳ "ಸೋಬಾನೆ ಸೊಬಗು" ಸಾಕ್ಷ್ಯಚಿತ್ರ ನಿರ್ಮಾಣ ಮಾಡಿಯೊಳೊ ಬಿಡುಗಡೆಗೆ ಕಾಯ್ತಾ ಒಳೊ.

ಮೇ 14 ಮತ್ತೆ 15 ರಂದ್ ಮೈಸೂರ್‌ಲಿ ನಡ್ಡಿದ ಅರೆಭಾಷೆ ಐಸಿರಿ ಕಾರ್ಯಕ್ರಮ ಹಂಗೆ ಅರೆಭಾಷಿಕರ ಭವ್ಯ ಮೆರವಣಿಗೆ ಇತಿಹಾಸ ಆಗುಟ್ಟು. ಸುಮಾರ್ 3000 ಕ್ಕೂ ಮೀರಿ ಸೇರಿದ್ದ ಜನ ಅರೆಭಾಷೆ ಸಂಸ್ಕೃತಿ ಬಗ್ಗೆ ಮೆಚ್ಚಿಗೆ ವ್ಯಕ್ತಪಡ್ಸಿದೊ.

ಮುಂದೆನ ದಿನಲಿ ಸಾಹಿತ್ಯ, ಅರೆಭಾಷೆ ಜನಪದ ಹಂಗೆ ಅರೆಭಾಷೆ ಸಾಂಪ್ರಾದಾಯಿಕ ಅಡಿಗೆ ಬಗ್ಗೆ ಒತ್ತು ಕೊಟ್ಟು ಕೆಲ್ಸ ಮಾಡುವ ಭರವಸೆ ಕೊಡ್ತಾ ಒಳೊ. ಅಕಾಡೆಮಿ ಶ್ರೇಯಸ್ಸಿಗೆ ದುಡಿತಾ ಇರ್ವ ಎಲ್ಲಾ ಅಕಾಡೆಮಿ ಸದಸ್ಯರಿಗೂ ಪುಸ್ತಕ ಸಮಿತಿ ಸದಸ್ಯರಿಗೂ ಹಿಂಗಾರ ಪ್ರಕಟಣಾ ಸಮಿತಿ ಸದಸ್ಯರಿಗೂ ಹಂಗೆ ಎಲ್ಲಾ ಓದುಗರಿಗೂ ನನ್ನ ಕೃತಜ್ಞತೆನ ತಿಳ್ಸ್‌ತಾ ಒಳೆ.

**10.09.2016** **– ಕೊಲ್ಯದ ಗಿರೀಶ್**

## ಸಂಪಾದಕೀಯ...

ನಾವೀಗ ಹಿಂಗಾರನ ನಾಲ್ಕನೇ ಎಸಳ್‌ನ ನಿಮ್ಮ ಮುಂದೆ ಇಡ್ತಾ ಒಳೊ. ಹಿಂದಿನ ಹಿಂಗಾರನ ಪ್ರೀತಿಲಿ ಸಹೃದಯ ಓದುಗರಾದ ನೀವು ಸ್ವೀಕರಿಸೊಳರಿ. ನಿಮ್ಮ ಬೆಂಬಲಕ್ಕೆ ನಾವ್ ಋಣಿಗ. ಅಕಾಡೆಮಿಂದ ಪ್ರಕಟ ಮಾಡ್ದ ಮೂರು ತ್ರೈಮಾಸಿಕಗ ಮೆಚ್ಚುಗೆಗೆ ಪಾತ್ರ ಆಗುಟು. ನಮ್ಮ ನಿರೀಕ್ಷೆ ತುಂಬ ಬರೆವವು ಬರೆವೊ ಎಂಬುದಾಗಿತ್ತು. ಆದರೆ ನಮ್ಮ ಎಣಿಕೆನಷ್ಟ್ ಬರಹಗ ಬರುತ್ತಾ ಇಲ್ಲೆ. ಇನ್ನು ಮುಂದೆ ಬರೆವೊರಿಂತೇಳುವ ನಂಬಿಕೆ ನಾವ್ಗೆ ಉಟ್ಟು.

ಈ ಸಂಚಿಕೆಲಿ ನಾವು ಪೊಗ್ದ್ನ ತಿಂಗಂದ (ಮಾರ್ಚ್ 15 ರಿಂದ ಜೂನ್ 15 ರ ತನಕ) ಅಕಾಡೆಮಿ ನಡ್ಸಿದ ಜಂಬರಗ ದಾಖಲೆ ಮಾಡ್ದರೊಟ್ಟಿಗೆ ಜಂಬರದ ಅವಲೋಕನ ಮಾಡ್ವ ಪ್ರಯತ್ನನೂ ಮಾಡ್ಯೊಳೊ. ಮೇ ತಿಂಗ್ಳ್‌ಲಿ ನಾವು ಮೈಸೂರ್‌ಲಿ ಅರೆಭಾಷಿಕ ಸಾಂಸ್ಕೃತಿಕ ಐಸಿರಿ ಜಂಬರ ಬಾರಿ ಪೊರ್ಲುಲಿ ನಡ್ಸಿಯೊಳೊ. ಈ ಜಂಬರ ಅರೆಭಾಷಿಕ ಸಮುದಾಯದ ಸಂಸ್ಕೃತಿ ಐಸಿರಿನ ಮೈಸೂರ್ನ ಬೇರೆ ಬೇರೆ ಸಮುದಾಯದ ಜನಕ್ಕೆ ಮುಟ್ಟುಸುವೊಲ್ಲಿ ಯಶಸ್ವಿಯಾಗುಟು. ಸರ್ಕಾರದ ಯೋಜನೆ ಮೇರೆಗೆ ಪರಿಶಿಷ್ಟ ಜಾತಿ–ಪಂಗಡಕೆ ಸಿಕ್ಕುವ ಅನುದಾನಲಿ ಇಬ್ಬರ್ ಅರೆಭಾಷಿಕ ಕಲಾವಿದರ ಸಾಕ್ಷ್ಯ ಚಿತ್ರ ನಿರ್ಮಾಣ ಮಾಡಿ ಬಿಡುಗಡೆಗೊಳ್ಸುದರೊಟ್ಟಿಗೆ ಸಿರಿಗಂಧ ಶ್ರೀನಿವಾಸ್‌ಲಿ ಅರೆಭಾಷೆ ಸಮುದಾಯದ ಅನನ್ಯವಾದ ಶೋಭಾನೆ ಹಾಡ್‌ಗಳ ಸಾಕ್ಷ್ಯ ಚಿತ್ರ ಮಾಡಿ ಬಿಡ್ಗಡೆಗೆ ಸಿದ್ಧ ಗೊಳ್ಸಿಯೊಳೊ. ಸಂಘ ಸಂಸ್ಥೆಗ ನಡೆಸುವ ಅರೆಭಾಷಿಕ ಕಾರ್ಯಕ್ರಮುಗಳಿಗೆ ಧನಸಹಾಯ, ಸಾಂಸ್ಕೃತಿಕ ತಂಡಗಳ ಪ್ರಾಯೋಜಕತ್ವಗಳ ಕೊಟ್ಟೊಳೊ. ಇನ್ನು ಮುಂದೆ ಈ ನಮ್ಮ ಅರೆಭಾಸೆನ ಉಳ್ಸಿ ಬೆಳ್ಸೊಕುಂತೇಳ್ವ ಉದ್ದೇಶಲಿ ಶಾಲೆ, ಕಾಲೇಜುಗಳ್ಲಿ ಕವಿ–ಕಾವ್ಯ ಕಮ್ಮಟ ನಡ್ಸುವ ಯೋಜನೆ ಹಾಕಂಡ್ ಅದರ ಕಾರ್ಯರೂಪಕ್ಕೆ ತರೊಕೂಂತ ಕ್ರಿಯಾಶೀಲರಾಗ್ತಾ ಒಳೊ.

ಅರೆಗಾಲ ಹೋಗಿ ಮಳ್ಗಾಲ ಬಾತ್. ಜನಂಗಳಿಗೆ ಬೆನ್ನಿ–ಬೇಸಾಯ, ತೋಟದ ಕೆಲ್ಸಲಿ ಪುರ್ಸೊತ್ತಿಲ್ಲೆ. ಮುಂದೆನ ಕಾಲದಂಗೆ ಈಗನ ಕಾಲ ಇಲ್ಲೆ. ಈ ಅರೆಭಾಸೆ ಕೂಟದೊವೆಲ್ಲಾ ಒಕ್ಕಲ್ಮೆ ಮಾಡೊವೇ ಆಗಿದ್ದೊ. ಇಂದ್ ಬತ್ತದ ಬೆಳೆ ಬದ್ಲ್ ಅಡಿಕೆ, ತೆಂಗ್, ರಬ್ಬರ್, ಒಳ್ಳೆಮೆಣ್ಸ್, ಹೀಂಗೆ ವಾಣಿಜ್ಯ ಬೆಳೆಗೆ ಬದಲಾಗೊಳೊ. ಈ ಬೆಳೆಗೆ

ಮಳೆ ಬಾರದಿದ್ದರೂ ಅಷ್ಟೇನು ತೊಂದರೆ ಆದ್ಲೆ. ಬತ್ತ ಆದರೆ ಮಳೆ ಬಾರದಿದ್ದರೆ ಬೆಳೆ ಬೆಳ್ಯಕೆನೇ ಆದ್ಲೆ. ಆದ್ರೂ ಮಳೆ ಸರಿಯಾದ ಕಾಲಕೆ ಬಾರದಿದ್ದರೂ ಅರೆಭಾಷಿಕರಿಗೆ ಭತ್ತ ಬೆಳ್ಯೊಕು ಬೇಸಾಯ ಮಾಡೊಕುಂತೇಳ್ವ ಖುಷಿ ಉಟ್ಟು. ಅದ್ಕಾಗಿ ಅಲ್ಪ-ಸ್ವಲ್ಪ ಭತ್ತದ ಗದ್ದೆ ಉಳ್ಸಿಕಂಡ್ ಭತ್ತದ ಬೆಳೆ ಬೆಳಿತಾ ಒಳೊ, ಭತ್ತ ಬೆಳ್ಯಕೆ ಆಗದಿದ್ದದೆ ನೆಟ್ಟಿಕಾಯಿ ಆದರ್ ಬೆಳ್ಸುವೆ. ಹೀಂಗೆ ಈ ಅರೆಭಾಷಿಕ ಜನ ಮಳ್ಗಾಲಲಿ ಒಂದಲ್ಲ ಒಂದು ಕೆಲ್ಸಲಿ ತೊಡ್ಗಿಕಂಡ್ ಇದ್ದವೆ. ಸುಗ್ಗಿ ತಿಂಗ್ಳ ಹಾಂಗೆ ಆರಾಮ ಇರ್ದುಲೆ. ಕಾರ್ತಿಂಗಳ್ಲಿ( ಕಾರ್ತ್ಯಲ್) ಕೆಡ್ಡೋಳು ಹಾಕಂಡ್ ಮಳೆಗೆ ಚಂಡಿ ಆದರ ತಪ್ಪಿಸಿಕಂಡ್ ನೇಜಿ ನೆಟ್ಟ್ ಬೇಸಾಯದ ಕೆಲ್ಸ ಮುಗ್ಸುವೆ. ದೈವಾರಾಧಕರಾದ ಅರೆಭಾಷಿಕರ್ ದೈವ ಕಾರ್ಯನ ಎಲ್ಲಾ ಬೇಸ್ಯ ಹತ್ತನೇ ದಿವ್ಸಕೆ ಅಂದರೆ ಪತ್ತನಾಜೆಗೆ ಮುಗ್ಸಿಕಂಡವೆ. ಇನ್ನ್ ಏನಿದ್ದರೂ ಆಟಿ ತಿಂಗಳ್ಲಿ ಬರುವ ಗುಳ್ಗನ ಹರ್ಕೆ, ಕಲ್ಲುರ್ಟಿ ಹರ್ಕೆ, ಕಾರ್ತಿಂಗಳ ಅಗೆಳ್ ಮಾತ್ರ ಇರ್ದು.

ಈ ಹಿಂಗಾರ ಸಂಚಿಕೆಲಿ ವರ್ತಮಾನದ ಸಾಮಾಜಿಕ, ಶೈಕ್ಷಣಿಕ ಭಾಷಿಕ, ಸಾಂಸ್ಕೃತಿಕ, ಸಂಗತಿಕ ಕುರ್ತ್ ಲೇಖನಗ ಬರಹಗ ಸಂಕಲ್‌ಸ್ಯೊಳೊ. ನಮ್ಮ ಅರೆಭಾಷಿಕ ಬರಹಗಾರರ್ ಈ ಬಗೆನ ಬರಹಗ ಬರೆನಿಂತೇಳಿ ನಾವು ಕೇಳಿಕಂಡ ಹಾಂಗೆ ಬರ್ದ್ ಕೊಟ್ಟೊಳೊ. ಕಥೆ ಕವನಗಳೊಟ್ಟಿಗೆ ವೈಚಾರಿಕ ಲೇಖನಗ ಮುಂದೆನೂ ಬರ್ದ್ ಕಳ್ಸಿರೆ ಈ ಸಂಚಿಕೆ ಮೌಲಿಕವಾಗಿ ಮುಂದುವರ್ಯಕೆ ಸಾಧ್ಯವುಟ್ಟು ಇನ್ನು ಮುಂದೆನೂ ನಾವ್ಗೆ ಬರಹಗಾರರ್ ಸಹಕರಿಸೊಕುಂತ ವಿನಂತಿಸಿಕೊಳ್ತಾ ಒಳೊ. ಈ ಸಂಚಿಕೆಗೆ ಮಸ್ತ್ ಜನ ಹಿರಿ-ಕಿರಿ ಬಹರಗಾರರ್ ಕಥೆ, ಕವನ, ಗಾದೆ, ಅಡುಗೆ, ಭಾಷೆನ ಬಗ್ಗೆ ಎಲ್ಲಾ ಬರ್ದ್ ಕಳ್ಸಿ ನಮ್ಮ ಈ ಹಿಂಗಾರ ಸಂಚಿಕೆ ಭಾರಿ ಹೆಸ್ರ್ ಪಡ್ದ್ ಮುಂದುವರಿಯಕೆ ಸಹಕರಿಸ್ಯೊಳೊ. ಪ್ರತಿ ಸಂಚಿಕೆಲಿನೂ ಒಬ್ಬ ಹಿರಿಯ ಬರಹಗಾರ, ಕಲಾವಿದ ಅಲ್ಲರೆ ಒಬ್ಬ ಸಾಮಾಜಿಕ ವ್ಯಕ್ತಿನ ಪರಿಚಯ ಇರೊಕುಂತೇಳ್ವ ಇರಾದೆಲಿ ಈ ಸರ್ತಿನ ಸಂಚಿಕೆಲಿ ಹಿರಿಯ ಶಿಕ್ಷಣ ತಜ್ಞರ್, ಬರಹಗಾರರ್ ಆದ ಡಾ.ಎನ್ ಸುಕುಮಾರ ಗೌಡ ಇವರ ಪರಿಚಯನ ಶ್ರೀ ವಿದ್ಯಾಧರ ಬಡ್ಡಡ್ಕರ ಕೃತಿ ಆಧಾರಲಿ ಶ್ರೀಮತಿ ಸಂಗೀತ ರವಿರಾಜ್ ಬರ್ದ ಲೇಖನ ಸಂಕಲ ಆಗುಟು.

ಈ ಸಂಚಿಕೆನ ಹೊರತಾಕೆ ಅಕಾಡೆಮಿ ಅಧ್ಯಕ್ಷರ್, ರಿಜಿಸ್ಟ್ರಾರರ್, ಸರ್ವ ಸದಸ್ಯರ್ ಸಹಕರಿಸ್ಯೊಳೊ, ಬರಹಗಾರರ್ ಮುತುವರ್ಜಿ ಮತ್ತು ಭಾಷೆನ ಪ್ರೀತಿಲಿ ತಮ್ಮ ಲೇಖನ ನೀಡಿ ಸಂಚಿಕೆನ ಮಹತ್ವನ ಹೆಚ್ಚಿಸ್ಯೊಳೊ. ಸಂಚಿಕೆನ ಮುಖ ಪುಟ ವಿನ್ಯಾಸ ಮಾಡ್ದ ಶ್ರೀ ಮೋಹನ್ ಸೋನ, ಪ್ರಿಂಟ್ ಹಾಕುವಲ್ಲಿ ಸಹಕರ್ಸಿದ ಮಡಿಕೇರಿನ ಶ್ರೀ ಕೃಷ್ಣಕಂಪ್ಯೂಟರ್ ಮತ್ತು ಪ್ರಿಂಟರ್ಸ್‌ನವುಕೆ, ಅಕ್ಷರ ಜೋಡಣೆಲಿ ಸಹಕರ್ಸಿದ ಚೆನ್ನಕೇಶವ ಜೆರಾಕ್ಸ್‌ನ ಶ್ರೀಮತಿ ಪುಷ್ಪಲತಾ. ಎ, ಅಕಾಡೆಮಿ ಸಿಬ್ಬಂದಿ ಶ್ರೀಮತಿ ಜ್ಯೋತಿ, ಪ್ರತಿ ತಿದ್ದುವಲ್ಲಿ ಸರೋಜ ಪಿ. ಕಣಿಯೂರು ಕೈ ಜೋಡ್ಸಿಯೊಳೊ. ಸಹಕರಿಸಿದ ಎಲ್ಲೊವ್ಕೆನೂ ತುಂಬು ಹೃದಯದ ಕೃತಜ್ಞತೆಗಳ ತಿಳ್ಸುವೆ.

ತಾ: 10.09.2016 **ಡಾ. ಪೂವಪ್ಪ ಕಣಿಯೂರು**



# ಹಿಂಗಾರ
# ಒಡ್ಸ್‌ಕನ

## ಕವನಗ

15. ಈ ಇಬ್ಬರ್ / ವಿದ್ವಾನ್ ಟಿ.ಜಿ ಮುಡೂರು
16. ಕನಸ್ / ವಿದ್ವಾನ್ ಟಿ.ಜಿ ಮುಡೂರು
17. ಸಂಬ್ಳದವರ ಹಾಡ್ / ಕುತ್ಯಾಳ ನಾಗಪ್ಪ ಗೌಡ (ಕಿರಣ)
18. ಉದ್ದಾರ / ಕುತ್ಯಾಳ ನಾಗಪ್ಪ ಗೌಡ (ಕಿರಣ)
19. ಇಡೀ ದಿನ ಮನೇಲಿ / ಲೀಲಾ ದಾಮೋದರ
20. ಎಲ್ಲಿಗೆ ಹೋಗುಟು ನಾಗು ಎಲ್ಲಿಗೆ ಹೋಗುಟು? / ಜಯಮ್ಮ ಚೆಟ್ಟಿಮಾಡ, ಸುಳ್ಯ
21. ಬಸ್ ಪಯಣ / ಎಂ.ಜಿ. ಕಾವೇರಮ್ಮ
22. ಮೋಡ – ಮಳೆ / ಗುತ್ತಿಮುಂಡನ ದೇವಿಕಾ ಗಿರೀಶ್
23. ಹೂ ಮಳೆ / ಕೊಟ್ಟಕೇರಿಯನ ಲೀಲಾ ದಯಾನಂದ
24. ದಲ್ಲಾಳಿ ಜನ್ನ / ಮನೋಜ್ ಕುಡೆಕಲ್ಲ್
25. ಮೋರೆ / ಮನೋಜ್ ಕುಡೆಕಲ್ಲ್
26. ಕುಡ್ಕತನದ ಅಪ್ಪ / ಭವಾನಿಶಂಕರ ಅಡ್ತಲೆ
27. ಅಡುಗೆ / ಎಂ.ಜಿ ಕಾವೇರಮ್ಮ
28. ಅರೆಭಾಷೆ ಗಾದೆಗ (ಸಂಗ್ರಹ) / ಯೋಗಿಶ ಹೊಸೊಳಿಕೆ
29. ಅರೆಭಾಷೆ ಗಾದೆಗ (ಸಂಗ್ರಹ) / ಶ್ರೀಮತಿ ತುಳಸಿ ಪ್ರಸಾದ್
30. ಅಕಾಡೆಮಿ ಪ್ರಕಟಣೆಗ
31. ಅಕಾಡೆಮಿ ಪ್ರಾಯೋಜಿಸಿದ ಮತ್ತು ಸಹಯೋಗದ ಕಾರ್ಯಕ್ರಮ.
32. ಲೇಖಕರ ವಿಳಾಸ
33. ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಸದಸ್ಯರ ವಿಳಾಸ



# ಡಾ. ಎನ್. ಸುಕುಮಾರ ಗೌಡ

– ವ್ಯಕ್ತಿ ಪರಿಚಯ

– ಶ್ರೀಮತಿ ಸಂಗೀತ ರವಿರಾಜ್

ನಮ್ಮ ಅರೆಬಾಸೆ ಗೌಡ ಜನಾಂಗಲಿ ಶಿಕ್ಷಣ ಚಿಂತಕರಾಗಿ ನಿಲ್ಲುವವರ್ಲಿ ನಂಗಾರು ಡಾ। ಸುಕುಮಾರ ಗೌಡ್ರ್ ಪ್ರಮುಖರಾಗಿ ಒಳ. ಗ್ರಾಮೀಣ ಪ್ರದೇಶಲಿ ವಿದ್ಯಾಭ್ಯಾಸ ಸುರುಮಾಡಿ ವಿದ್ಯೆಯ ಮಹತ್ವನ ಆಗಲೇ ತಿಳ್ಕಂಡ್, ಅವರ ತೀರದ ಜ್ಞಾನ ದಾಹನೇ ಶಿಕ್ಷಣದ ಬಗ್ಗೆ ಹೊಸ ಹೊಸ ಆಯಾಮಗಳ ಸಮಾಜಕ್ಕೆ ಕೊಡುವಂಗೆ ಮಾಡ್ತ್. ಎಪ್ಪತ್ತೇಳರ ಪ್ರಾಯದ ಇವರ ಜ್ಞಾನದ ತುಡಿತ ಇನ್ನೂ ಇಂಗಿರಿಕಿಲ್ಲೆ ಎಂಬುದು ನನ್ನ ನಿಲುವು. ಈ ನಿಲುವು ಖಂಡಿತ ಅತಿಶಯೋಕ್ತಿ ಅಲ್ಲ.

ಜಾಲ್ಸೂರುನ ನಂಗಾರು ರಾಮಯ್ಯ ಗೌಡ ಮತ್ತೆ ರಾಮಕ್ಕ ದಂಪತಿಗಳ ಎರಡ್ ಮಕಲ್ಲಿ 1941 ರ್ಲಿ ಹುಟ್ಟಿದ ಸುಕುಮಾರ ಗೌಡರು ಸುರುನೊವು ಎರಡನೆ ಮಗಳ್ ಶ್ರೀಮತಿ ಲಲಿತ. ಇವ್ರ ಅಮ್ಮ ರಾಮಕ್ಕನವು ಸುಳ್ಯ ತಾಲೂಕು ಗೂನಡ್ಕದ ಪೆಲ್ತಡ್ಕ ಎಸ್.ಪಿ ಕೂಸಪ್ಪ ಗೌಡರ ಅಕ್ಕ. ಡಾ. ಸುಕುಮಾರ ಗೌಡರು ಎಳೆ ಪ್ರಾಯಲಿ ಗೂನಡ್ಕ ಪರಿಸರಲಿ ಆಟಾಡಿ ಬೆಳ್ದವು. ಇವರ ಹೆಣ್ಣ್ ಬೆಂಗಳೂರ್‌ನ ಎಸ್.ಪಿ ನಾರಾಯಣಸ್ವಾಮಿ ಗೌಡರ ಮಗಳ್ ಶ್ರೀಮತಿ ಗಿರಿಜಾ. ಅವಿನಾಶ್ ಮತ್ತ್ ಅಮಿತಾ ಮಕ್ಕಳ್.

1956 ರ್ಲಿ ಎಸ್.ಎಸ್.ಎಲ್.ಸಿ ಪಾಸಾದ ಮೇಲೆ ಪುತ್ತೂರ್ಲಿ ಪಿ.ಯು.ಸಿ ಶುರು ಆಗುವರ್ಗೆ ಎರಡ್ ವರ್ಷ ಕಾಯಕಾಯ್ತ್. ಈ ಸಮಯಲಿ ಶಾರ್ಟ್ ಹ್ಯಾಂಡ್ ಮತ್ತೆ ಇಂಗ್ಲೀಷ್ ಟೈಪ್ ರೈಟಿಂಗ್ ಕಲ್ತೊ.. ಆಗಲೇ ಇವುಕೆ ಇಂಗ್ಲೀಷ್ ಬಗ್ಗೆ ಜಾಸ್ತಿ ಆಸಕ್ತಿನೂ ಮತ್ತೆ ಇಂಗ್ಲೀಷ್ ಜ್ಞಾನ ಸ ಹೆಚ್ಚಾತ್. ಇಂಗ್ಲೀಷ್ ನಿಘಂಟ್ ಇವರೊಟ್ಟಿಗೆ ಯಾಗೋಳು ಇರ್ತಿದ್ದ ಪುಸ್ತಕ. ಇದರಂದ್ಲೆ ಇವರ ಕಲಿವ ಆಸಕ್ತಿ ಎಷ್ಟಿತ್ತ್ ಎಂತ ನಾವುಗೆಲ್ಲಾ ಅರ್ಥ ಆದೆ.

ಅವ್ಕೆ ನಾನೊಬ್ಬ ಒಳ್ಳೆ ಶಿಕ್ಷಕ ಆಕುಂತೇಳುವ ಗುರಿ. ಪದವಿ ಮಾಡಿಕಂಡಿರಿಕಾಕನಲೇ ನೆನ್ಸಿಕಂಡ್ ಆಗಿತ್ತ್ ಪದವಿ ಆದಮೇಲೆ ಬಿ.ಇಡಿ ಮಾಡಿ ಸುರುನ ಕೆಲ್ಸಕ್ಕೆ ಸೇರಿಕಂಡೊ. ಸ್ನಾತಕೋತ್ತರ ಪದವಿನ ಸ ಪಡ್ದೊ. ಮತ್ತೆ ಮೈಸೂರ್‌ನ ಮಾನಸ ಗಂಗೋತ್ರಿಲಿ ಎಂ.ಇಡಿ ಶಿಕ್ಷಣ ಮುಗ್‌ಸಿದೊ. ಮಣಿಪಾಲಲಿ 'ಕಾಲೇಜ್ ಆಪ್ ಎಜುಕೇಶನ್‌ಲಿ' ಕೆಲ್ಸಲಿ ಇರಿಕಾಕನ ಮದರಾಸ್‌ನ ಬ್ರಿಟೀಷ್ ಕೌನ್ಸಿಲ್‌ಲಿ 'ಅಪ್ಲೈಡ್ ಲಿಂಗ್ವಿಸ್ಟಿಕ್' ಕೋರ್ಸ್ ಮಾಡ್ದೊ. ಮತ್ತೆ 1972ರ್ಲಿ ಇಂಗ್ಲೀಷ್ ಮೆತಡಾಲಜಿ ಶಿಕ್ಷಕರ್‌ಗೆ ನಡ್ಸುವ ಯು.ಜಿ.ಸಿ ಕೋರ್ಸ್ ಮಾಡ್ದೊ. ಮತ್ತೆ ಅದೇ ವರ್ಸ ಬ್ರೆಝಿಲ್ ದೇಶದ ಶಿಕ್ಷಣ ತಜ್ಞ' ಘೊಲೋ ಫೆರೆ' ನ ದ ಪೆಡಗಾಜ ಆಪ್ ದಿ ಒಪ್ರೆಸ್ಡ್' ಎಂಬ ಪುಸ್ತಕದ ಬಗ್ಗೆ ನಡ್ದ ಹತ್ತು ದಿನದ ಅಂತರಾಷ್ಟ್ರೀಯ ವಿಚಾರಗೋಷ್ಠಿಲಿ ಭಾಗವಹಿಸಿದೊ. ಸ್ವತಃ ಘೋಲೋ ಪೈಕಿ ಭಾಗವಹ್ಸಿದ ಆ ಗೋಷ್ಟಿಲಿ ಅವಕಾಶ ಸಿಕ್ಕಿದ್ ನಂಗೆ ಮುಂದೆ ಬಾಕಿ ಸಿಕ್ಕಿದ ಸೌಭಾಗ್ಯಂತ್ಲೆ ಸುಕುಮಾರ ಗೌಡರ್ ಭಾವಿಸಿದ್ದೊ. ಇದಾದ ಮೇಲೆ ಸಮುದಾಯ ಅಭಿವೃದ್ದಿನ ಬಗ್ಗೆ ಮೈಸೂರ್‌ನ ಅಡ್ಮಿನಿಷ್ಟ್ರೇಟಿವ್ ಇನ್‌ಸ್ಟಿಟ್ಯೂಟ್‌ಲಿ ತರಬೇತಿ ಪಡ್ದೊ.

ಈ ಎಲ್ಲಾ ಓದಿಗೆ ಸಂಬಂಧಪಟ್ಟ ಚಟುವಟಿಕೆಗಳ ಮಾಡಿಕನ ಅವರ ಪಿ.ಹೆಚ್.ಡಿ ಮಾಡೊಕುಂತೇಳುವ ತುಡಿತ ಜಾಸ್ತಿ ಆಕಂಡೇ ಇತ್ತ್. ಇವರ ಇನ್ನೂ ಇನ್ನೂ ಕಲಿಯೊಕುಂತೇಳುವ ಆಸಕ್ತಿನೇ ಕೆನಡಾ ದೇಶಕ್ಕೆ ಹೋಗುವಂಗೆ ಮಾಡ್ತ್. ಪಿ.ಹೆಚ್.ಡಿ ಮಾಡ್ವ ದೊಡ್ಡ ದೊಡ್ಡ ಉದ್ದೇಶ ಇಸಿಕಂಡ್ ಕೆನಡಾ ದೇಶಕ್ಕೆ ಕಾಲಿಟ್ಟೊ. ಕೆನಡಾಕ್ಕೆ ಹೋದ ಮೇಲೆ ಅಲ್ಲಿ ಪಿ.ಹೆಚ್.ಡಿ ಮಾಡಿಕೆ ಬೇಕಾದ ಮೂಲಭೂತ ಅರ್ಹತೆ ಭಾರತಲಿ ಇಷ್ಟ್ ಪದವಿ ಪಡ್ದ್ ಸ ಸಾಕಾಗಿತ್ಲೆ. ನಮ್ಮ ದೇಶದ ಓದಿಗು ಅಲ್ಲಿನ ಪದವಿಗಳಿಗು ತುಂಬಾನೆ ವ್ಯತ್ಯಾಸ ಇತ್ತ್. ಇಷ್ಟು ಸ ಅಲ್ಲದೆ ಇವ್ರ ಓದುಂದ ಅಲ್ಲಿ ದೊಡ್ಡ ಉದ್ಯೋಗಕ್ಕು ಅವಕಾಶ ಇತ್ಲೆಗಡ ಮತ್ತೆ ಅಲ್ಲಿ 'ಲೆಟರ್ ಆಫ್ ಸ್ಟ್ಯಾಂಡಿಂಗ್' ಎಂಬ ಪರೀಕ್ಷೆ ತಕಂಡ್ 'ಸಪ್ಲೈ ಟೀಟಿಂಗ'ತೇಳುವ ಭೋಧಕ ಕೆಲ್ಸಕ್ಕೆ ಸೇರಿಕಂಡೋ. ಸಂಜೆ ಟೊರೆಂಟೊ ವಿಶ್ವವಿದ್ಯಾನಿಲಯಲಿ ಗ್ರಂಥಾಲಯಕ್ಕೆ ಕೆಲ್ಸಕ್ಕೆ ಸೇರಿಕಂಡೊ. ಇದರೊಟ್ಟಿಗೆ ಪಿ.ಹೆಚ್.ಡಿ ಬೇಕಾದ ಅಲ್ಲಿನ ವಿದ್ಯೆ ಸಂಪಾದಿಸುದರ್ಲಿ ಲಾಯ್ಕ ತೊಡಗಿಸಿಕಂಡೊ. ಕಿಂಗ್‌ಟನ್‌ನ ಕ್ವೀನ್ಸ್ ವಿಶ್ವವಿದ್ಯಾನಿಲಯಂದ ಎಂ.ಎಸ್. ಪದವಿ ಪಡಕೊಂಡೊ. ಇದರೊಟ್ಟಿಗೆ ಕೆನಡ ಕೌನ್ಸಿಲ್ ಪ್ರಾಜೆಕ್ಟ್ ಒಂದರ್ಲಿ ರೀಸರ್ಚ್ ಅಸಿಸ್ಟಂಟ್ ಆಗಿ ಕಾರ್ಯ ನಿರ್ವಹಿಸಿದ್ದೊ. ಮತ್ತೆ ಕೆನಡಲಿ ರೈಸನ್ ಅಂತೇಳುವ ರಕ್ಷಣ ಸಂಸ್ಥೆಂದ Emotional Distrebence in children and Youth' ಎಂಬ ವಿಷಯಲಿ ಕೋರ್ಸ್ ಮಾಡ್ದೊ.'ಯಾರ್ಕ್ ವಿಶ್ವವಿದ್ಯಾನಿಲಯಂದ Exceptational ಮಕ್ಕಳ ಶಿಕ್ಷಣ ಸಂಸ್ಥೆಲಿ ಡಿಪ್ಲೊಮೊ ಮಾಡ್ದೊ. ಇಷ್ಟೆಲ್ಲಾ ಅಧ್ಯಯನಲಿ ಪ್ರಗತಿ ಮಾಡ್ದರಂದ ಟೊರೆಂಟೊ ವಿಶ್ವವಿದ್ಯಾನಿಲಯಲಿ Curriculum in language education (ಭಾಷಾ ಶಿಕ್ಷಣದ ಪಠ್ಯಪದ್ಧತಿ') ಎಂಬ ವಿಷಯಲಿ ಪಿ.ಹೆಚ್.ಡಿ ಮಾಡಿಕೆ ಅವಕಾಶ ಸಿಕ್ಕಿತ್. ಓದುನ ಖರ್ಚಿಗೆ ಬೇಕಾದ ಸಾಲನ ಅಲ್ಲಿನ ಸರಕಾರಂದ್ಲೆ ಮಾಡ್ದೊ. ಪಿಹೆಚ್.ಡಿ ಆದ ಮೇಲೆ ಒಂದು ವರ್ಸ ಅವಧಿನ ಹೆಚ್ಚುವರಿ ಸಂಶೋಧನೆಗೆ ಕೊಡುವ ಎಸ್.ಎಸ್.ಎಚ್.ಆರ್.ಸಿ

ಪೋಸ್ಟ್ ಡಾಕ್ಟೊರಲ್ ಪೆಲೋಶಿಫ್‌ಗಾಗಿ ಕೊಟ್ಟ ಅರ್ಜಿನ ರಾಷ್ಟ್ರ ಮಟ್ಟದ ಸಮಿತಿ ' ಕೆನಡ ಕೌನ್ಸಿಲ್ ಪರಿಗಣ್ಸಿ ಡಾ|ಸುಕುಮಾರ ಗೌಡರ ಆಯ್ಕೆ ಮಾಡ್ತಾ ಮತ್ತೆ ಮೆಕ್‌ಗಿಲ್ ವಿಶ್ವವಿದ್ಯಾನಿಲಯಲಿ ಪೋಸ್ಟ್ ಡಾಕ್ಟೋರಲ್ ಸಂಶೋಧನೆ ನಡ್ಸಿದೊ. ಇಲ್ಲಿ ಸಂಶೋಧನಾ ಕಾರ್ಯ ನಡ್ಸಿಕಂಡಿರಿಕಾಕನ ಎಂ.ಎಡ್. ವಿದ್ಯಾರ್ಥಿಗಳಿಗೆ ಪಠ್ಯ ಕ್ರಮನ ಸ್ವಂತ ರಚಿಸಿ ಬೋಧಿಸಿಕೆ ಇತ್ತ್. ಈ ಹೊತ್ತ್‌ಲಿ ಗೌಪ್ಯವಾಗಿ ನಡ್‌ಸ್ತಿದ್ದ ಮೌಲ್ಯಮಾಪನಲಿ ದಾಖಲೆಯ ಅಂಕ ಸಂಪಾದಿಸಿ ಸುಕುಮಾರ ಗೌಡ್ರು ಪೋಸ್ಟ್ ಡಾಕ್ಟೋರಲ್ ಫೆಲೋಶಿಫ್‌ನ ಮತ್ತೊಂದು ವರ್ಷದ ಮಟ್ಟಿಗೆ ವಿಸ್ತರಿಸಿಕಂಡೊ. ಯಾವುದೇ ಶಿಕ್ಷಣ ಸಂಸ್ಥೆಗು ಹೋದರು ಸ ಅಲ್ಲಿ ಗೌಡರು ಗರಿಷ್ಠ ಮಟ್ಟದ ಮನ್ನಣೆ ತಕಂಡೆ ಹಿಂದಿರುಗ್ತಿದ್ದೊ. ಮೆಕ್‌ಗಿಲ್ ವಿಶ್ವವಿದ್ಯಾನಿಲಯಲಿ ಇದ್ದ ಸಮಯಲಿ ಡಾ. ಸುಕುಮಾರಗೌಡ್ರು ಮಗುವಿನ ಕಲಿಕೆಯ ಪ್ರಕ್ರಿಯೆ ,ಜ್ಞಾನಾರ್ಜನೆ, ವಾಚನ ಮತ್ತೆ ಲೇಖನ ಕಲೆ, ಮೌಲ್ಯಮಾಪನ ಹಿಂಗೆ ಸುಮಾರ್ ಇಪ್ಪತ್ತಕ್ಕು ಹೆಚ್ಚ್ ವಿಷಯಗಲ್ಲಿ ಪ್ರಬಂಧಗಳ ರಾಷ್ಟ್ರೀಯ ಅಂತರಾಷ್ಟ್ರೀಯ ಶಿಕ್ಷಣ ಸಂಸ್ಥೆಗ ಗೌರವ ಸದಸ್ಯತನ ನೀಡ್ಯೊಳ. 1986 ರ್‌ಲಿ ಮತ್ತೆ ಭಾರತಕ್ಕೆ ಬರುವ ನಿರ್ಧಾರ ತಕಂಡ್ ತಮ್ಮ ಜ್ಞಾನನ ನಮ್ಮ ದೇಶಲಿಯೆ ಬೆಳ್ಸುವ ಕನಸು ಕಂಡೊ, ಭಾರತಕ್ಕೆ ಬಂದ್ ಮನೆ ತಲ್ಪಿ ಸುಮಾರ್ ಆರೇಳ್ ವಾರಗ ಆದ ಮೇಲೆ ಇವರ ಸಾಮಾನ್ ಕಟ್ಟ್‌ಗ ಬಂದರ್‌ಗೆ ಬಾತ್. ಟ್ಯಾಕ್ಸ್ ಅಧಿಕಾರಿಗಳ್‌ಂದ ಕರೆ ಬಾಕನ ಸಾಮಾನ್ ಬುಡ್ಸಿಕಂಕೆ ಎಷ್ಟ್ ದುಡ್ಡು ಕೊಡೊಕು ಎಂಬ ಚಿಂತೆಲಿಯೆ ಅದರ ತಕಣಿಕೆ ಮುಂಬಯಿಗೆ ಹೋದೊ. ಅಲ್ಲಿ ಹೋದ ಮೇಲೆ ಅಧಿಕಾರಿ ಹೇಳ್ದ ಮಾತ್ ಕೇಳಿ ಇವುಕೆ ನಂಬಿಕೆ ಆತ್ಲೆ. "ಇಂತ ವ್ಯಕ್ತಿನ ನಾವು ಇಷ್ಟರವರೆಗೆ ಕಂಡತ್ಲೆ. ಹನ್ನೆರಡ್ ವರ್ಷ ಕೆನಡಲಿ ಇದ್ದ್ ಬಾಕನ ನೀವು ತಂದದರ ನೋಡ್ರೆ ಭಾರಿ ಆಶ್ಚರ್ಯ ಆದೆ, ಇಲ್ಲಿಯವರೆಗೆ ಬಂದವು ಸ್ಟೀರಿಯೋ ಸಿಸ್ಟಮ್, ಟಿ.ವಿ, ಎಲೆಕ್ಟ್ರಾನಿಕ್ ಸಾಮಾನುಗ ಇಂತದರ್ನೆ ತಂದದ್. ಆದರೆ ನಿಮ್ಮಂಗೆ ಬರೇ ಪುಸ್ತಕಗಳ, ಅದೂ ಇಷ್ಟೊಂದು ತಂದವು ಯಾರೂ ಇಲ್ಲೆ. ನಿಮ್ಮಂತವರ ನೋಡಿ ಮಾತಾಡ್ಲೊಕು ಅಂತನೆ ನಾವಿಲ್ಲಿಗೆ ಕರ್ಸಿದ್ ಅಂತ ಅಧಿಕಾರಿಗ ಹೇಳಿ ಕಳ್ಸಿದೊ. ಈ ಪ್ರಸಂಗನ ನೋಡಿಕಾಕನ ಡಾ|ಸುಕುಮಾರ ಗೌಡರ ಅಭಿರುಚಿ ನಾವುಗೆಲ್ಲ ಅರ್ಥ ಆದೆ.

ಡಾ. ಸುಕುಮಾರ ಗೌಡರು ಮಣಿಪಾಲ ಭಾಷಾ ಸಂಸ್ಥೆಯ ನಿರ್ದೇಶಕರಾಗಿ ನೇಮಕಗೊಂಡೊ ಅದೇ ಸಮಯಲಿ DSERT ಸಲಹ ಮಂಡಳಿಗು ಆಯ್ಕೆಗೊಂಡೊ. ಇಂಗ್ಲೀಷ್ ಬೋಧನೆ. ಪಿ.ಹೆಚ್.ಡಿ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ಕೊಡ್ತಿದ್ದೊ. ಭಾಷಾ ವಿಷಯಲಿ ಕಾರ್ಯಗಾರ ನಡ್ಸಿದೊ. ಸುಮಾರ್ ಶೈಕ್ಷಣಿಕ ಯೋಜನೆಗಳ ಹಾಕಂಡ್ ಸರಕಾರಕ್ಕೆ ಮನವಿ ಸಲ್ಲಿಸಿದೊ. ಆ ಯೋಜನೆಗಲ್ಲಿ ಪುತ್ತೂರ್‌ನ ಬಾಲವನಲಿ ಮುಕ್ತಾ ಕಲಿಕಾ ಕೇಂದ್ರ ಸ್ಥಾಪಿಸುದು ಕೂಡ ಇತ್ತ್. ಇದ್ ಅವರ ಮಹದಾಸೆನು ಆಗಿತ್ತ್. ಅದರ್‌ಂದ 1991 ರ್‌ಲಿ ಭಾಷಾ ಸಂಸ್ಥೆನ ಕೆಲ್ಸ ಬುಟ್ಟ್ ಸ್ವಂತ ಊರು ಪುತ್ತೂರ್‌ಗೆ ಬಂದೊ. ತಾವೆ ಕನಸ್ ಕಂಡ ಹಂಗೆ 'ಶಿಕ್ಷಣ ಅಧ್ಯಯನ ಕೇಂದ್ರದ' ಸ್ವಂತ ಕಟ್ಟಡನ ಸ ಕಟ್ಟಿದೊ,. ಡಾ. ಶಿವರಾಮಕಾರಂತರಂದ ಬಾಲವನದ ಈ ಶಿಕ್ಷಣ ಅಧ್ಯಯನ ಕೇಂದ್ರದ ಉದ್ಘಾಟನೆ ಆತ್ ಅಂದ್‌ಂದ ಅಲ್ಲಿ ಮಕ್ಕಳಿಗೆ

ಕಲಿಕಾ ಸಾಮರ್ಥ್ಯ ವೃದ್ಧಿ ಮತ್ತೆ ಶಿಕ್ಷಕರಿಗೆ ಭೋದನಾ ಸಾಮರ್ಥ್ಯ ವೃದ್ಧಿಗಾಗಿ ತರಬೇತಿಗ, ಕಮ್ಮಟಗ, ಗೋಷ್ಠಿಗ ಬುಡದೆ ನಡ್ಕಂಡ್ ಬಾತ್. ಇಲ್ಲಿರುವ ಲೈಬ್ರೆರಿಗ ಎಂ.ಫಿಲ್, ಪಿಹೆಚ್‌ಡಿ ವಿದ್ಯಾರ್ಥಿಗ ಎಲ್ಲಿಂದೆಲ್ಲ ಬಂದ್ ಪ್ರಯೋಜನ ಪಡ್‌ಕಂಡವೆ. ಶಿಕ್ಷಣ ಕ್ಷೇತ್ರಕ್ಕೆ ಸಂಬಂಧಿಸಿದಂಗೆ ಅದರ್ಲ್ಲು ಅಲ್ಲಿಂದಲೇ ಬಂದ್ ಪ್ರಯೋಜನ ಪಡಕಂಡವೆ. ಶಿಕ್ಷಣ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಅದರ್ಲ್ಲು ಇಂಗ್ಲೀಷ್ ಮೆತಡಾಲಜಿಗೆ ಬೇಕಾದ ಪುಸ್ತಕಗ ಎಲ್ಲಾ ಇವರ ಲೈಬ್ರೆರಿಲಿ ಉಟ್ಟು.

ಡಾ. ಸುಕುಮಾರ ಗೌಡರು ಭಾರತಕ್ಕೆ ಬಂದ ಮೇಲೆ' problems and prospects of our education' ಎಂಬ ಇಂಗ್ಲೀಷ್ ಪುಸ್ತಕ ಮಾಡಿಕೆ ಡಾ. ಕಾರಂತರ ಹಕ್ಲೆ ಮುನ್ನುಡಿ ಬರಿಯಕೆ ಕೊಟ್ಟೊ. ಮುನ್ನುಡಿ ಬರ್ದ್ ಕೊಡಿಕಾಕನ ಅವ್ಕೆ ಆಶ್ಚರ್ಯದ ಸುದ್ದಿ ಅದರ್ಲಿ ಬಂದಿತ್. ಆ ಪುಸ್ತಕನ ಅವು ಭಾರೀ ಮೆಚ್ಚಿಕಂಡಿದ್ದ ಅಲ್ಲದೆ. ಅನುಮತಿ ಸಿಕ್ಕಿರೆ ಕನ್ನಡಕೆ ಅನುವಾದ ಮಾಡ್ನೆ ಎಂಬ ಸುದ್ದಿ ಅದರ್ಲಿತ್. ಮುಂದೆ ಡಾ. ಸುಕುಮಾರ ಗೌಡರ ಆ ಕೃತಿನ ಡಾ. ಶಿವರಾಮ ಕಾರಂತರು 'ನಮ್ಮ ಶಿಕ್ಷಣ ಪದ್ಧತಿಯ ಸಮಸ್ಯೆಗಳು, ಭವಿಷ್ಯವು' ಎಂಬುದಾಗಿ ಕನ್ನಡಕ್ಕೆ ತರ್ಜುಮೆ ಮಾಡ್ದೊ. ಪ್ರಶಸ್ತಿಗಳಿಗೆ ಯಾಗೊಳು ಆಸೆ ಪಡೆದ ಗೌಡರಿಗೆ ಇಂತ ಪ್ರಶಸ್ತಿಗಳೇ ಗೌರವ ಅಂತನ್ಸಿತ್.

ಇವರ ಶಾಲಾ ಪೂರ್ವ ಶಿಕ್ಷಣ ಕಾರ್ಯಕ್ರಮದ ಪರಿಕಲ್ಪನೆ ಹಾಂಗೆ 'ಮಕ್ಕಳ ಮಂಟಪ ಇವರ್ದೆ ಯೋಜನೆ ಮತ್ತೆ ಪರಿಶ್ರಮಲಿ ತುಂಬಾ ಅದ್ಭುತವಾಗಿ ನಡ್ಕಂಡ್ ಬಂದುಟು. ಶಿಕ್ಷಣದ ಬಗ್ಗೆ ಕಲಿಕೆನ ಬಗ್ಗೆ ಇವರ ನಿಲುವು ಪ್ರತಿಯೊಬ್ಬನು ಮೆಚ್ಚುವಂತದ್ದೆ.

ಶಿಕ್ಷಣಕ್ಕೆ ಸಂಬಂಧಪಟ್ಟ ಹಂಗೆ, language for doctors, basic English, problems and prospects of our education, learning and the learner, ಮಗು ಮನೆಯಿಂದ ಶಾಲೆಗೆ, ಗುಣಶೋಧ, ಕಲಿಕೆ, ಇನ್ನು ಸುಮಾರ್ ಕೃತಿಗ ಪ್ರಕಟಿಸಿದಲ್ಲದೆ 'ಶಿಕ್ಷಣ ದರ್ಶನ' ಅಂತೇಳುವ ತ್ರೈಮಾಸಿಕ ಪ್ರಕಟಿಸಿದ್ದೊ.

ಡಾ. ಸುಕುಮಾರ ಗೌಡರಿಗೆ ಮಾತೃಭಾಷೆ, ಅರೆಬಾಸೆನ ಮೇಲೆ ತಾಯಿನ ಮೇಲೆ ಇರುವಷ್ಟೇ ಗೌರವ. ಕುಟುಂಬದವರೊಟ್ಟಿಗೆ ಮತ್ತೆ ನಂಟ್ರೊಟ್ಟಿಗೆ ಅರೆಭಾಸೆಲಿ ಮಾತಾಡ್ತಿದ್ದೊ ಹೊರ್ತ್ ಬೇರೆ ಬಾಸೆ ಪ್ರಯೋಗ ಮಾಡ್ತಿತ್ಲೆ. ನೆಂಟ್ರ ಮನೆನ ಎಲ್ಲ ಜಂಬರಗಳಿಗೆ ಬಂದು ಪಾಲ್ಗೊಂಡವೆ. ಅವರ ಇತರ ಬಾಸೆನ ಗೆಳೆಯರೊಟ್ಟಿಗೆ ತಮ್ಮ ಅರೆಬಾಸೆನ ಗೆಳೆಯರೊಂದಿಗೆ, ತಮ್ಮ ಅರಬಾಸೆನ ಬಗ್ಗೆ ತಮ್ಮ ಆತ್ಮಿಯೊರೊಟ್ಟಿಗೆ ಹೇಳಿಕಂಡಳೊ. ನಾವು ಬೇರೆ ಬಾಸೆ ಕಲ್ತ್ ಅದರ್ಲಿ ಸಾಕಷ್ಟ್ ಸಾಧಿಸಿರು ಮಾತೃ ಬಾಸೆನ ಮರಿಯಕಾಗದ್ ಎಂಬ ಭಾವನೆ ಅವರ್ದ್. ಅರೆಬಾಸೆ ಗೌಡ್ರಲ್ಲಿ ಇಂತಹ ಅಪ್ರತಿಮ ಸಾಧನೆ ಮಾಡ್ದ ಡಾ. ಎನ್ ಸುಕುಮಾರ ಗೌಡರ ವಿಶ್ರಾಂತ ಜೀವನ ಲಾಯ್ಕಿಲಿ ಇರ್ಲಿಂತ ನಾವೆಲ್ಲ ಹಾರೈಸಮ. **(ಆಕರ: ಶಿಕ್ಷಣ ಸಿದ್ಧಾಂತಿ ಡಾ. ಎನ್ ಸುಕುಮಾರ ಗೌಡ – ಕೆ.ಆರ್. ವಿದ್ಯಾಧರ ಬಡ್ಡಡ್ಕ)**

# ಅರೆಬಾಸೆ.......... ! ಅರೆನಾ?

– ವಿದ್ವಾನ್ ಟಿ.ಜಿ ಮುಡೂರು

ಅರೆ ಅಂದರೆ ಇಡಿ ಅಲ್ಲ. ಇಡಿನ ತುಂಡು ಮಾಡ್ದ ಒಂದ್ ಪಾಲ್ ಅಂತ ಜನಗ ಅಳತೆ ಮಾಪನಲಿ ಹೇಳ್ವೆ. ಆದರೆ ಮಾತಾಡ್ವ ಬಾಸೆಲಿ ಅರೆಗೆ ಅರ್ಧಾಂತ ಮಾತ್ರ ಅರ್ಥ ಅಲ್ಲ. ಅದಕೆ ಹೆಚ್ಚಿನ ಅರ್ಥ ಬಂದದೆ. ಹತ್ತ್ ಕುಟುಂಬ ಹದಿನೆಂಟ್ ಗೋತ್ರದ ಕೊಡಗ್ ಕನ್ನಡ ಜಿಲ್ಲೆಲಿ ಮಾತ್ರ ಇರ್‌ವ ಗೌಡ ಸಮುದಾಯದವು ಆಡುವ ಅರೆಬಾಸೆಗೆ ಅರೆದ–ತಿಕ್ಕಿದ–ಸವೆದ–ಪಳಗಿದ ಗಡಸಿನ ಬಾಸೆಂತ ಹೇಳಕ್. ಅರೆಬಾಸೆ ನಮ್ಮ ಪೂರ್ವದ ಹಳೆಗನ್ನಡದ ಮೂಲರೂಪ. ಎಲ್ಲಾ ಬಾಸೆಗ ಗ್ರಾಂಥಿಕ ಬರೆಹಲಿ ಪೂರ್ಣ ರೂಪಲಿ ಕಂಡರೆ ಮಾತಾಡ್ಕನ ಅವ್ ಅರೆ ಅರೆಯಾಗಿ ಹೊರಹೊಮ್ಮಿವೆ. ಉಂಬಕನ ತಿಂಬಕನ ಯಾರ್ ಇಡಿನ ನುಂಗುದಿಲ್ಲೆ. ಪುಡಿಯಾಗೇ ತಿಂದವೆ. ಅಬ್ಬೆಸ ಬಲಲಿ ಇಡಿ ಬಾಯಿಲಿ ಪುಡಿಯಾಗೇ ಹೋದೆ. ಹಂಗೇನೆ ನಾವ್ ಮಾತಾಡ್ಕನ ಪುಸ್ತಕಲಿ ಬರ್ದಂತೆ ಇಡಿವಾಕ್ಯ ಪದಗಳ ಬಿಡಿ ಬಿಡಿ ಆಗಿ ಆಡುದಿಲೆ. ಕಡಿಮೆ ಸಮಯಲಿ ಹೆಚ್ಚ್ ವಿಷಯನ ಹೇಳಿಕೆ ಅರ್ಥಕೆಡದ ಹಾಂಗೆ ಕೆಲ ಪದಗಳ ಅಕ್ಷರಗಳ ಬುಟ್ಟು ಮಾತಾಡುವೆ. ನಡೆದ್ ನಡೆದ್ ದಾರಿ ಸವೆದ ರೀತಿಲಿ ನುಡಿದ್ ನುಡಿದ್ ಬಾಸೆನ ಹೊರ ಸಿಪ್ಪೆ ಕಳೆದ್ ಅದರ ಒಳ ತಿರುಳ್ ಮಾತ್ರ ಉಳ್ದದೆ. ಹಿಂಗೆ ಗೌಡ ಕನ್ನಡ ಅರೆಬಾಸೆನ ಕೇಳುವವಕ್ಕೆ ಅರ್ಥ ಆವ ರೀತಿಲಿ ತುಂಡರಿಸಿದ ಕನ್ನಡ ಹೊರ ಕವಚ ಕಳೆದ್ ಉಳಿದ ತಿರುಳ್ ಕನ್ನಡ ಅಂತ ಹೇಳಕ್. ಅರೆಬಾಸೆಲಿ ಆಗಾಗ ಬಾವ ಗಡ ಪದಗ ಹಳೆಗನ್ನಡಲಿ ಬಾವ ಅಂತೆ–ವೋಲ್–ದಲ್–ದಿಟಂ ನಿಶ್ಚಿತಾರ್ಥಗಳ ಕೊಟ್ಟದೆ. ಹಳೆಗನ್ನಡದ 'ನಿನಗಿದು ಅಂತ್ಯಕಾಲಂ ಗಡ' ಅರೆಗನ್ನಡದ ಅಂವ ಹೋದೆ ಗಡ–ಅವು ಹೇಳಿದೊಗಡ ಎಂಬ ಪ್ರಯೋಗಗಳ ಈ ಎರಡ್ ಬಾಸೆಗಳಲಿ ನಾವು ಕಾಣಕ್.

ಎಲ್ಲಾ ಬಾಸೆಗಳಲಿ ಮಾತಾಡ್‌ಕನ ಅಲ್ಪ ಸೊಲ್ಪ ಅರೆ ಆದರೆ ಗೌಡ ಮತ್ತ್ ಹವ್ಯಕ ಬ್ರಾಹ್ಮಣರ್ ಆಡುವ ಕನ್ನಡಲಿ ಅತೀ ಹೆಚ್ಚ್ ಅರೆ ಕಂಡ್ ಬಂದದೆ. ಸುಮಾರ್ ನಾಲ್ಕಯಿದ್ ನೂರು ವರ್ಸಗಳ ಹಿಂದೆನೆ ಒಂದೇ ಪ್ರದೇಶಂದ ಒಂದೇ ಹೊತ್ತಿಗೆ ದಕ್ಷಿಣ ಕನ್ನಡ ಜಿಲ್ಲೆಲಿ ಬಂದ್ ನೆಲೆಊರಿದ ಗೌಡ ಹವ್ಯಕ ಸಮಾಜಗಳ ಬಾಸೆಗಳಲಿ ಹೆಚ್ಚಿನ ಸಾಮ್ಯತೆ ಕಂಡದೆ. ಗೌಡರಾಡುವ ಕನ್ನಡಲಿ ಹೋನೆ(ಹೋಗುತ್ತೇನೆ), ಬನ್ನೆ(ಬರುತ್ತೇನೆ) ಎಂಬಂತೆ ಹವ್ಯಕರಾಡುವ ಹೋತ್ತೆ(ಹೋಗುತ್ತೇನೆ), ಬತ್ತೆ(ಬರುತ್ತೇನೆ) ಎಂಬುದರ ಉದಾರಿಸಕ್. ಈ ಎರಡ್ ಬಾಸೆಗಳಲಿ ನಾಲ್ಕ್ ಅಕ್ಷರಗಳ ಪದ ಪ್ರಯೋಗಲಿ ಎರಡ್ ಅಕ್ಷರಗಳ ಕಳಕಂಡ್ ಎರಡೇ ಅಕ್ಷರಗಳಲಿ ಸಂವಹನ ವ್ಯಕ್ತವಾದೆ. ಹೀಂಗೆ ಈ ಎರಡ್ ಬಾಸೆಗಳಲಿ ಅರೆ ಕಂಡ್ ಬಂದರ್‌ೀ ಗೌಡ ಕನ್ನಡನ ಮಾತ್ರ ಅರೆಬಾಸೆಂತ ಹೇಳ್‌ದು ಚೋದ್ಯ ಕಂಡದೆ. ಮೇಲ್ ವರ್ಗದ ಜನ ಆಡುವ ಬಾಸೆನ ಅರೆಬಾಸೆಂತ ಹೇಳಿಕೆ ಅವರ ಬಾಸೆಲಿ ವ್ಯವಹರಿಸಿಕೆ ಕೆಳವರ್ಗದವಕ್ಕೆ ಅಂಜಿಕೆ. ಜಾತಿಲಿ ಮೇಲ್-ಕೀಳ್ ಮಡಿ-ಮೈಲಿಗೆ ಇದ್ದ ಹಾಂಗೆ ಬಾಸೆಲೂ ಹಿಂದಣ ಕಾಲಲಿ ಇದ್ದದ್ ಇಂದ್‌ೀ ಕಡಿಮೆ ಆತಿಲ್ಲೆ. ಯಾಗಲೂ ಮೇಲ್ಜಾತಿಯವು ಕೆಳಜಾತಿಯವ್‌ರ ಹತ್‌ರ ಅವರ ಕೀಳ್ ಬಾಸೆಲೇ ಮಾತಾಡುವೆ ಹೊರ್‌ತ್ ಅವ್‌ರ ತಮ್ಮ ಮನೆ ಮಾತಿಲಿ ಮಾತಾಡಿಕೆ ಬುಡುದಿಲ್ಲೆ. ಆದರೆ ಕೆಲ ಸಂದರ್ಬಲಿ ಮಾತ್‌ರ ಅವ್ ಅವ್‌ರ ಬಾಸೆಲೇ ಮಾತಾಡೋಕಾದೆ. ಅವು ಮಿಂದ್ ಮಡಿ ಉಟ್ಟು ಪೂಜೆಗೆ ತಯಾರಾಕನ ಶೂದ್ರರ್ ಎದ್‌ರ್ ಬಂದಾಗ ಅವ್‌ರಲಿ ಅವು ಬಟ್‌ರ ಬಾಸೆಲೇ ಮಾತಾಡಿವೆ. ಮಡಿಲಿ ಸೂದ್ರ ಬಾಸೆ ಮಾತಾಡಿರೆ ಬಟ್ಟರ ಮಡಿ ಕೆಟ್ಟದೆಗಡ. ದೇಶದ ಗಡಿ ವಿವಾದಗಳ ಜತೆ ಬಾಸೆ ವಿವಾದಗ ಹೆಚ್ಚಿವೆ. ಒಂದೇ ಬಾಸೆನ ಅದರ ಬೇರೆ ಬೇರೆ ಕಡೆಗಳಲಿ ಜನ ತಾವ್ ಆಡ್‌ವ ಬಾಸೆನೇ ಶುದ್ದಂತ ಹೇಳ್ತಾ ಪಡುವಣವು ಮೂಡಣನವುರ ಬಾಸೆಗಳ ಹಾಸ್ಯ ಮಾಡುವೆ. ಅವಿದ್ಯಾವಂತರ ಬಾಸೆ ವಿದ್ಯಾವಂತರಿಂದ ಹಳ್ಳಿಗರ ಬಾಸೆ ನಾಗರಿಕರ್‌ಂದ ಅಪಹ್ಯಾಸಕ್ಕೆ ಒಳಗಾದೆ. ಇದ್ ಕನ್ನಡಲಿ ಮಾತ್ರ ಅಲ್ಲ, ಮರಾಠಿ ಬಾಸೆಲೂ ಕಂಡದೆ. ಪರಿಶಿಷ್ಟ ವರ್ಗದ ಮರಾಟಿ ನ್ಯಾಕ ವರ್ಗದ ಜನ ಆಡುವ ಮರಾಠಿಯ ಅರೆ ಮರಾಟಿ ಎಂದ್ ಕರೆದವೆ.

ಇತ್ತೀಚೆನ ಗೌಡ ಯುವ ಪೀಳಿಗೆಲೂ ತಮ್ಮ ಬಾಸೆನ ಅರೆಬಾಸೆಂತ ಕರ್‌ದಾಗ ಆವ ಅಳ್ಕ್ ಮನಸಿಂದ ಮಾಸಿತಿಲ್ಲೆ. ಇದರ ಹೇಳ್ಕನ ನಮ್ಮ ಗುತ್ತಿಗಾರ್ ಕೇಂದ್ರಲಿ ನಡ್ದ ಕವಿಗೋಷ್ಠಿನ ನೆಂಪಾದೆ. ಇದ್ ನಡ್ದದ್ 1965ರಲ್ಲಿ ಇರೋಕು. ಕಳ್ದ ಮೂವತ್ತು ವರ್ಸಗಳ ಹಿಂದೇನೆ ಅರೆಬಾಸೆಲಿ ಬರೆವ ಕವಿಗಳಿದ್ದೊ. ಸುಳ್ಯದ ಕುರುಂಜಿ ಕಾಲೇಜಿಲಿ ಕಲ್ತ್ ಹೊರಬಂದ ಗೌಡ ಯುವ ಪೀಳಿಗೆ ಸಾಹಿತ್ಯ ಕೆಲ್ಸಲಿ ತೊಡಗಿದ್ದೊ. ಸುಳ್ಯ ಪುತ್ತೂರು ಕೊಡಗಿಂದ ಅಲ್ಲದೆ ಬೆಂಗಳೂರಲಿ ಇದ್ದ ಇಲ್ಲಿನ ಕೆಲವರ್ ಅಂದ್ ಕೂಟಕ್ಕೆ ಬಂದಿದ್ದೊ. ಅವರಲ್ಲಿ ಕವಿಗಳ ಜತೆ ಕವಿತೆಗಳ ಕೇಳಿಕೆ-ಕವಿಗಳ ಹುರುಪುಗೊಳಿಸಿಕೆ ಊರ ಪರವೂರ ಸಾಹಿತ್ಯಾಭಿಮಾನಿಗ ಸೇರಿದ್ದೊ. ಅವ್‌ರಲಿ ಈ ಬಾಸೆ ಬಗ್ಗೆ ಹೆಚ್ಚ್ ಕೆಲ್ಸ ಮಾಡ್ದ ಹಿರಿಯ ಭಾಷಾ ವಿಜ್ಞಾನಿ ಡಾ।ಕೋಡಿ ಕುಶಾಲಪ್ಪ ಗೌಡರ್-ಹಿರಿಯ ಕವಿ ದಿ.ಮೂಲೆ ಮಜಲ್ ಶಿವರಾಯರ್-ಅರೆಬಾಸೆಲಿ ಹಾಡ್ ಬರ್‌ದ್ ಹೆಸರ್ ಮಾಡ್ದ ಹೊದ್ದೇಟಿ ಭವಾನಿ ಶಂಕರರ್ ಭಾಗವಹಿಸಿದ್ದೊ.

ಕವಿಗೋಷ್ಠಿಯ ಅಂತ್ಯಕೆ ಸಣ್ಣ ಪ್ರಮಾಣಲಿ ಅರೆಬಾಸೆನ ಕುರಿತು ಒಂದ್ ವಿಚಾರ ವಿನಿಮಯ ಕೂಡಾ ನಡ್‌ತ್. ಅದರಲಿ ಗೌಡ ಅರೆಕನ್ನಡಲಿ 'ಅರೆ' ಇರೋಕೊ? ಬುಡೋಕೊ? ಇದರ ಯಾವ ಹೆಸ್ರಿಂದ ಕರಿಯೋಕು? ಹಲವರ್‌ಂದ ಕೆಲವು ಅಭಿಪ್ರಾಯಾಗ ಬಾತ್. ಅವ್‌ಗಳ ಒಟ್ಟ್ ಸಾರಾಂಶ ಇಷ್ಟ್.

ಈ ನಮ್ಮ ಬಾಸೆನ ಅರೆಬಾಸೆಂತ ಕರೆವುದು ಸರಿ ಅಲ್ಲ. ಅದ್ ಬಾಸೆಯ ಅಲ್ಪತನ ತೋರ್‍ಸಿದೆ. ಈ ಬಾಸೆನ ಸಂಶೋಧನೆ ಮಾಡಿ ಡಾಕ್ಟರೇಟ್ ಪಡ್‌ದ ಭಾಷಾ ವಿಜ್ಞಾನಿ ಕೋಡಿಯವು ಇದರ ಗೌಡ ಕನ್ನಡಂತ ಕರ್‍ದೊಳೊ. ಈ ಜಿಲ್ಲೆಲಿರ್‌ವ ಹವೀಕ ಬ್ರಾಹ್ಮಣರ್ ನಮ್ಮ ಅರೆಬಾಸೆ ಹಾಂಗೆ ಇರ್‌ವ ಅವರ ಬಾಸೆನ ಹವೀಕ ಕನ್ನಡಂತ ಕರ್‍ದವೆ. ಪ್ರೊ. ಕೋಡಿ ಕುಶಾಲಪ್ಪ ಗೌಡರ್ ಮತ್ತ್ ಪ್ರೊ. ಮರಿಯಪ್ಪ ಭಟ್ಟರ್ ಬಾಸೆಲಿ ನೋಡ್ಕನ ಭಾರೀ ಹತ್ತಿರ ದವೇ ಆದ ನಮ್ಮೂರವು ಮದರಾಸು ವಿಶ್ವವಿದ್ಯಾಯಲಿ ಇವರಿಬ್ಬರ್ ಕನ್ನಡ ವಿಭಾಗಳಲಿ ಸೇವೆ ಸಲ್ಲಿಸಿ ನಿವೃತ್ತರಾದವು. ಮೊದಲ್ ಪ್ರೊ.ಭಟ್ಟರ್ ತಮ್ಮ ಬಾಸೆನ ಹವ್ಯಕ ಕನ್ನಡ ಹೆಸ್ರಲ್ಲಿ ತಮ್ಮ ಸಂಶೋಧನಾ ಕೃತಿ ಹೊರ ತಂದ ರೀತಿಲೇ ಅವರ ಜತೆಲಿದ್ದ ಪ್ರೊ. ಕೋಡಿಯವು ಅರೆಬಾಸೆನ ಬುಟ್ಟ್ ತಮ್ಮ ಕೃತಿಗೆ ಗೌಡ ಕನ್ನಡ ಅಂತ ಹೆಸರಿಟ್ಟೊ. ಹವ್ಯಕ ಕನ್ನಡಂತ ಹವ್ಯಕ ಸಮಾಜದವು ಮಾತ್ರ ಆಡುವ ಆ ಬಾಸೆಗೆ ಆ ಹೆಸರು ಒಪ್ಪಿದೆ. ಆದರೆ ಅರೆಬುಟ್ಟ ಗೌಡ ಕನ್ನಡ ಮೈಸೂರಾಚೆ ಕಡೆ ಬಯಲು ಸೀಮೆನ ಗೌಡರ್‌ಗ ಆಡುವ ಬಾಸೆನೇ ಅಲ್ಲ. ಗೌಡರಾಡುವ ಅರೆಗನ್ನಡಕೂ ಬಯಲ ಸೀಮೆನ ಕನ್ನಡಕೂ ವ್ಯತ್ಯಾಸ ಉಟ್ಟು. ಹತ್ತ್ ಕುಟುಂಬ ಹದಿನೆಂಟ್ ಗೋತ್ರದ ಗೌಡ ಕನ್ನಡಲಿ ಅರೆಬಾಸೆನ ಬುಡಿಕಾಗದ್ ಈ ಬಾಸೆನ ಬರೇ ಅರೆಬಾಸೆಂತಲೂ ಕರೆಯಕಾಗದ್. ಅದ್ ಹಿಡಿ ಇಲ್ಲದ ಕತ್ತಿ ಆದೆ. ಯಾದರ ಅರೆ? ಕನ್ನಡದ ಅರೆ. ಯಾರ್ ಆಡುವ ಬಾಸೆ ಅಂತಲೂ ಸ್ಪಷ್ಟತೆ ಇರೋಕು. ಈ ಬಾಸೆನ ಗೌಡ ಅರೆ ಕನ್ನಡ ಅಂತ ಹೇಳ್ರೆ ಸರಿಯಾದೆ. ಇದರ ಅರೆಬಾಸೆಂತ ಮಾತ್ರ ಹೇಳ್ರೆ ಅರೆಯಾದೆ. ಗೌಡ ಅರೆಕನ್ನಡಂತ ಹೇಳ್ರೆ ಇಡಿಯಾದೆ.

ಕಾಲ ಬದಲಾವುಟು. ಬಾಸೆ ಬಳಕೆಲಿ ತಮ್ಮದ್ ಅರೆ ಸಣ್ಣದ್ ಅಲ್ಪಂತ ಅಳ್ಕದೆ ವಿದ್ಯಾವಂತ ಯುವ ಪೀಳಿಗೆ ಮುಂದೆ ಬಂದದೆ. ಅರೆಬಾಸೆಗೆ ಕರ್ನಾಟಕ ಸಾಹಿತ್ಯ ಸಂಸ್ಕೃತಿ ಅಕಾಡೆಮಿಲಿ ಸ್ಥಾನ ಸಿಕ್ಕುಟ್ಟು. ಹಿಂದೆ ಆಡು ನುಡಿ ಆಗಿ ಅರೆಮರೆಲಿದ್ದ ಅರೆಬಾಸೆ ಇಂದ್ ಸಾಕ್ಷರತೆ ಪಡೆದ ಕನ್ನಡಲಿ ಲಿಪಿಗಳ ಬಳಸಿ ಬರೆಹಕೆ ಮುಂದಾಗುಟು. ಅರೆಬಾಸೆನ ಗೌಡರ್ ಹಳ್ಳಿಂದ ಡೆಲ್ಲಿವರೆಗೆ ಸಮಾಜದ ಎಲ್ಲಾ ರಂಗಗಳಲಿ ತಮ್ಮ ಸಾಧನೆಗಳ ಎತ್ತಿ ತೋರಿಸ್ತಾ ಒಳೊ. ಹೊತ್ತಿಗೆ ತಕ್ಕಂತೆ ಮಿಡಿವ-ಸಂದರ್ಭಕ್ಕೆ ಸರಿಯಾಗಿ ಸಿಡಿವ ಅರೆಬಾಸೆ ಇನ್ನಸ್ಟ್ ಎತ್ತರಕೆ ಬೆಳಿಯೋಕು. ಹಳ್ಳಿನ ಮಣ್ಣ ಮೂರಿಲಿ ಚಿಗುರೊಡೆದ್ ಪೇಟೆ ಪಟ್ಟಣ ನಗರಗಳ ಸೊಗಡುಗಳ ಕೂಡಿ ಕಂಡ್ ಸಾಹಿತ್ಯದ ಹಲ ಪ್ರಕಾರಗಳಲಿ ಅರೆಬಾಸೆನ ಹಲ ಕೃತಿಗ ಅರಳಿ ಬರೋಕು. ಸಾಹಿತ್ಯದ ಜತೆ ಸಂಸ್ಕೃತಿನೂ ಉಳಿಯೋಕು.

* * * * *

# ಫೇಸ್ ಬುಕ್ಕ್‌ನ ಎಡವಟ್ಟ್

**- ಉಳುವಾರನ ರೋಶನ್- ವಸಂತ್**

ಅಮೇರಿಕದ ಕ್ಯಾಲಿಪೋರ್ನಿಯಾಲ್ಲಿ ಲಾಯಿಕದ ಕಂಪೆನಿಲ್ಲಿ ಕೆಲ್ಸ‌ಸ ಮಾಡಿಕಂಡ್ ಇರ್ವ ಪುಟ್ಟುಗೆ 24 ವಯಿಸ್ಸ್. ಇಂವ ಹುಟ್ಟಿದ್ ಬೆಳ್ದದ್ ಕೊಡಗ್ನಲ್ಲಿ. ಅದರ್ ಇವಂಗೆ ಏನರ್ ಸಾಧನೆ ಮಾಡೊಕುತ ಆಸೆ. ಇವನ ವಿದ್ಯಾಭ್ಯಾಸ ಎಲ್ಲಾ ಮೈಸೂರ್ನ ವಿಶ್ವ ವಿದ್ಯಾನಿಲಯಲ್ಲಿ ಆತ್.

ಇಂಗೆ ಒಮ್ಮೆ ಪುಟ್ಟುನ ಗೆಳೆಯ ಒಬ್ಬ ಪುಟ್ಟುನ ಮಾತಡ್‌ಸೋಕ್ತ ಅವನ ಮನೆಗೆ ಬಂದದೆ. ಅದರೆ ಅಂವ ಅಮೇರಿಕಲ್ಲಿ ಇರ್ವ ವಿಸಯ ಅವಂಗೆ ಗೊತ್ತಿರ್ದುಲೆ. ಪುಟ್ಟುನ ಗೆಳೆಯ ಮನೆಗೆ ಬಂದವ ಅಂವನ ಅಪ್ಪ, ಅವ್ವನ ಮಾತಡ್‌ಸಿ ಅವನ ಫೋನ್ ನಂಬರ್‌ನ ತಕ್ಕಂಡ್ ಬೆಂಗಳೂರಿಗೆ ಹೊರ್ಟದೆ. ಬೆಂಗಳೂರಿಗೆ ತಲ್‌ಪಿದ ಮ್ಯಾಲೆ ಅವಂಗೆ ಅವನ ಒಂದು ಹಳೆಯ ಪುಸ್ತಕ ಸಿಕ್ಕಿದೆ. ಅದರ್‌ಲ್ಲಿ ಪುಟ್ಟುನ ಇಮೇಲ್ ಐಡಿ ಸಿಕ್ಕಿದೆ. ತಕ್ಷಣ ಅವನ ಗ್ಯಾನ ಆಗಿ ಅವಂಗೆ ಇಮೇಲ್ ಮಾಡ್‌ದ್ದೆ. ಅವನ ಇಮೇಲ್‌ಗೆ ಪ್ರತಿ ಉತ್ತರಸ ಬಂದದೆ. ಇಬ್ಬರಿಗೂ ಎಲ್ಲಿಲ್ಲದ ಹಳೆದ ನೆನಪುಗ ತುಂಬಾ ಕುಸಿ ಆದರೆ ಪುಟ್ಟುಗೆ ಇಮೇಲ್ ಬುಟ್ಟ್‌ರ್ರೆ ಬ್ಯಾರೆ ಎಂಥಸ ಗೊತ್ತಿದುಲೆ.

ಪುಟ್ಟುನ ಗೆಳೆಯ ಅವನ ನೋಡಕ್ಕ್‌ತ ಆಸೆ ಆಗಿ ಅವನ ಹತ್‌ರ ಇರ್ವ ಪೋಟೋನ ಕಳ್ಸಿಕೆ ಹೇಳ್‌ದ್ದೆ. ಪುಟ್ಟು ಇಮೇಲ್‌ಲ್ಲಿ ಫೋಟೋನ ಕಳ್ಸಿಕೆ ಸುರು ಮಾಡ್‌ದ್ದೆ. ಇಬ್ಬರು ಸಹ ಪೋಟೋಗಳ್‌ನ ಕಳ್ಸಿ ಕಂಡವೆ. ಇಂಗೆ ಇರ್‌ಕಾಕನ ಪುಟ್ಟುನ ಗೆಳೆಯ ಕೇಳ್‌ದ್ದೆ. ನೀನ್ ಪೇಸ್ ಬುಕ್ಕ್‌ನ ಬಳಕೆ ಮಾಡ್ಲೇನಾತ. ಅಗ ಅಂವ ಹೇಳ್‌ದ್ದೆ ಅಮೇರಿಕಲಿ ನಾವು ಟ್ವಿಟರ್ ಬಳ್‌ಕೆ ಮಾಡ್‌ದ್ದ್ ಪೇಸ್‌ಬುಕ್ಕಿಗಿಂತ, ಅಗ ಅಂವ ಹೇಳ್‌ದ್ದ ನೀನ್ ಒಮ್ಮೆ ಪೇಸ್‌ಬುಕ್ಕ್‌ಲ್ಲಿ ಅಕೌಂಟ್ ಮಾಡ್. ಎಲ್ಲಾವುಸ ಸಿಕ್ಕಿವೆ. ಸರಿತ ಹೇಳಿ ಪುಟ್ಟು ಪೇಸ್‌ಬುಕ್ಕ್‌ನ ಅಕೌಂಟ್ ಮಾಡ್‌ದ್ದೆ.

ಪುಟ್ಟು ಪೇಸ್‌ಬುಕ್ಕ್‌ಲ್ಲಿ ಅಕೌಂಟ್ ಖಾತೆ ಮಾಡ್‌ದ್ದೆ. ಮಾಡ್‌ದ ಮ್ಯಾಲೆ ಇಂವ ಸುರುಗೆ ಗೆಳೆಯಂಗೆ ರಿಕ್ವೆಸ್ಟ್ ಕಳ್ಸಿದೆ. ಅವನು ಅದರ ಎಕ್ಸೇಪ್ಟ್ ಮಾಡ್‌ದ್ದೆ. ಇಬ್ಬರ್‌ಸ ತಮ್ಮ ಹಳೇ ವಿಷಯನೆಲ್ಲ ಮಾತಡಿಕಂಡ್ ಇದ್ದವೆ. ಪುಟ್ಟುನ ಗೆಳೆಯಂಗೆ ಮದುವೆ ಆಗಿದ್ದದೆ. ಅಂವ ಹೆಣ್ಣ್ ಮಕ್ಕಳೊಟ್ಟಿಗೆ ಲಾಯಿಕಲಿ ಜೀವನ ಮಾಡಿಕಂಡ್ ಇದ್ದದೆ.

ಪುಟ್ಟುನ ಗೆಳೆಯ ಕೇಳ್‌ದ್ದೆ ಪುಟ್ಟುನ ನೀನ್ ಯಾಕೆ ಇನ್ನು ಮದುವೆ ಅತ್ಲೆರ ಬೇಗ ಮಾಡಿಕನ್ದ್‌ದ್ ತಾನೆ. ಪಾಪ ನಿನ್ನ ಅಪ್ಪ ಅವ್ವ ಅಲ್ಲಿ ಉಸುರು ಕಟ್ಟಿಕಂಡ್ ಗದ್ದೆ, ತೋಟತ ಒಳೋ ನೀನ್ ನೋಡ್ರೆ ಅಮೇರಿಕಲಿ ಒಳಲ್ಲಾ. ಅಗ ಪುಟ್ಟು ಹೇಳ್‌ದೆ ಸರಿ ನಾನ್ ಇನ್ನ್ ಗೂಡೆ ನೋಡಿಕೆ ಸುರು ಮಾಡ್‌ನೆ. ಸರಿ ಇನ್ನ್ ಯಾಗರ್ ಸಿಕ್ಕಿನೆ ಮೇಸೆಜ್ ಮಾಡ್ನೆತ ಹೇಳ್‌ದ್ದೆ.

ಮಾರನೇ ದಿನ ಪುಟ್ಟುಗೆ ಒಂದು ಗೂಡೆ ರಿಕ್ವೆಸ್ಟ್ ಕಳ್ಸಿದೆ. ಅವಳ ಹೆಸರ್ ಚಿನ್ನಿತ. ಇವನು ರಿಕ್ವೆಸ್ಟ್‌ನ ಎಕ್ಸೆಪ್ಟ್ ಮಾಡ್‌ದ್ದೆ. ಇಬ್ಬರುಸ ಅವರವರ ಫೋಟೋ ಹಾಕಿರ್ದುಲೆ ಇಬ್ಬರುಸ ತಮ್ಮ ತಮ್ಮ ಪರಿಚಯ ಮಾಡಿಕಾಣಿಕೆ ಸುರು ಮಾಡ್ವೆ. ಇಂಗೆ ಇಬ್ಬರುಸ

ಪುರುಸೊತ್ತ್ ಇಲ್ಲದೆ ಮೇಸೆಜ್ ಮಾಡಿಕಂಡ್ ಇದ್ದವೆ. ಅ ಗೂಡೆ ಒಂದನೇ ಡಿಗ್ರಿಲಿ ಓದ್ತ್ತ ಇದ್ದದೆ. ಅವಳ ಬಣ್ಣ ಬಣ್ಣದ ಮಾತಿಗೆ ಇವಂಗೆ ಅವಳ ಮ್ಯಾಲೆ ಪ್ರೀತಿ ಸುರುದ್ದೆ.

ಒಂದು ತಿಂಗ ತೀರ ಇಬ್ಬರಿಗೊಬ್ಬರು ಇಷ್ಟ ಅದರು ಯಾರುಸ ಹೇಳಿಕಣ್‌ದ್ದ್‌ಲ್ಲೆ. ಇವನ ಜೀವನ ಅಮೇರಿಕಲ್ಲೆ ಲಾಯಿಕಲೆ ಇತ್ತ್. ಭಾರತಂದ ಅಂವ ಅಮೇರಿಕಾಕ್ಕೆ ದಾಟಿ ಎರಡ್ ವರ್ಷ ಅದರೂಸ ಮನೆಗೆ ಬಂದಿರ್ದುಲೆ. ಆದರೆ ಇವಂಗೆ ನೋಡಕ್ಕ್‌ತ ತುಂಬಾ ಆಸೆ ಆಗಿ ಅವಳ್ನ ನೋಡಿಕೆ ಒಮ್ಮೆ ಕೊಡ್‌ಗಿಗ್ಗೆ ಹೊರ್‌ಟೆ ಬುಟ್ಟದೆ.

ಚಿನ್ನಿಗೆ ಮನೆಲ್ಲಿ ಹೈದ ನೋಡ್‌ತ್ತ ಇದ್ದವೆ, ಚಿನ್ನಿಗೆ ತನ್ನ ಗೆಳೆಯನ ವಿಸಯನ ಹೇಳಿಕೆ ಧೈರ್ಯ ಇರ್ದುಲೆ. ಮನೆಲ್ಲಿ ಅಪ್ಪ, ಅವ್ವನ ಮಾತು ಮೀರುವಂಗೆ ಇಲ್ಲೆ. ಅಪ್ಪ ದೊಡ್ಡ ಪಾಳೆಗಾರ. ಈ ಗೂಡೆಗೆ ತನ್ನ ಮದುವೆ ಆಗುವ ಹೈದ ಒಳ್ಳೆ ಕೆಲ್ಸಲ್ಲಿ ಇರಕ್ಕು, ಒಳ್ಳೆ ದುಡ್ಡು, ದೊಡ್ಡ ಕಾರ್ ಇರಕ್‌ತ ಆಸೆ. ಆದರೆ ಇವಳ ಅಪ್ಪಂಗೆ ಒಳ್ಳೆ ಗದ್ದೆ, ತೋಟ ಇರ್‌ವ ಹೈದನ ನೋಡಿ ಮದುವೆ ಮಾಡಕ್ಕ್‌ತ ಆಸೆ. "ಏನ್ ಮಾಡ್‌ದ್ದ್ ಕಾಲ ಹೇಳ್‌ದಂಗೆ ಕೇಳ್‌ದುಲ್ಲೆ ಅಲ್ಲಾ".

ಪುಟ್ಟು ಮನೆಗೆ ಇದ್ದಕ್ಕಿದಂಗೆ ಬಾಕನ ಮನೆಲ್ಲಿರುವ ಎಲ್ಲಾವುಕ್ಕು ಆಶ್ಚರ್ಯ ಹಂಗೆ ಕುಸಿನೋ ಕುಸಿ ಗಮ್ಮತ್‌ಲ್ಲಿ ಊಟ ಎಲ್ಲಾ ಕೊಟ್ಟ್ ಹೈದನ ಹೊಗ್ಗುಳಿಕೆ ಸುರು ಮಾಡಿವೆ.

ಹಿಂಗೆ ಒಂದು ದಿನ ಪುಟ್ಟುಗೆ ಅಪ್ಪ ಹೇಳ್‌ದ್ದೆ ಮಂಜ ನೀನ್ ಇನ್ನ್ ಮದುವೆ ಆಗಿ ಬುಡು. ನಿನ್ನ ಒಂದು ಮದುವೆ ಮಾಡ್ಸಿರೆ ನಮಿಗು ಸಮ್‌ಧಾನ ಆದೆತ. ಆಗ ಪುಟ್ಟು ಹೇಳ್‌ದ್ದೆ ನಂಗೆ ಒಂದು ತಿಂಗ ಸಮಯ ಕೊಡಿ ನಾನ್ ಗ್ಯಾನ ಮಾಡಿ ಹೇಳ್ನೆ.

ಮಂಗಳೂರ್‌ನ ಒಂದು ಛತ್ರಲ್ಲಿ ಪುಟ್ಟು ನೋಡ್‌ದ ಅ ಗೂಡೆನ ಮದುವೆ ಆಗಿ ಹೋಗಿದದ್ದೆ. ಹೈದ ದಿನ ಆ ಗೂಡೆನ ಮೊಬೈಲ್‌ಗೆ ಫೋನ್ ಮಾಡ್‌ದ್ದೆ. ಆದರೆ ಆ ನಂಬರ್ ಸ್ವಿಚ್ ಆಪ್ ಆಗಿದ್ದದೆ. ಹಿಂಗೆ ಬೇಜರಾಲಿ ಹೈದ ಒಂದು ತೀರ್ಮಾನಕ್ಕೆ ಬಂದದೆ. ಅವನ ಸ್ನೇಹಿತನ ಸಹಾಯ ಕೇಳಿ ಆ ಗೂಡೆನ ನಂಬರ್‌ನ ಪತ್ತೆ ಹಚ್ಚಿಕೆ ಸುರು ಮಾಡ್‌ದ್ದೆ. ಹೆಂಗೋ ಪುಟ್ಟುನ ಸ್ನೇಹಿತ ಆ ಗೂಡೆ ಇರುವ ವಿಳಾಸನ ಹುಡ್‌ಕ್ಕಿದೆ. ಇಬ್ಬರು ಕೂಡಿಕಂಡ್ ಗೂಡೆನ ಮನೆ ಬಾಗಲ್‌ಗೆ ತಲ್‌ಪ್‌ವೆ. ಗೂಡೆ ಇಬ್ಬರ್‌ನ ಸೌಜನ್ಯಂದ ಮಾತಡ್ಸಿ ತನ್ನ ಎಲ್ಲಾ ಕಷ್ಟನ ಹೇಳಿಕಂಡ್ ಪುಟ್ಟುಗೆ ಬುದ್ದಿ ಹೇಳ್ದೆ. ಇನ್ನಾರ್ ನನ್ನ ಮರಿಯಾನಿ ನಾನ್ ಮಾಡ್ದ ದೊಡ್ಡ ತಪ್ಪ್ ನಿಮಿಗೆ ಮೋಸ ಮಾಡಿಯೊಳೆ. ಬ್ಯಾರೆ ಗೂಡೆನ ನೋಡಿ ಮದುವೆ ಆಗಿ ಲಾಯಿಕ್ಕಾಲ್ಲಿ ಇರಿತ ಬುದ್ದಿ ಹೇಳ್‌ದ್ದೆ. ಪಾಪ ಹೈದ ಪುಟ್ಟು ಬೇಜರಲ್ಲಿ ಬೆಂಗಳೂರ್‌ಂದ ಕೊಡಗ್ಗಿಗೆ ಬಂದ್ ಅಪ್ಪ, ಅವ್ವಂಗೆ ಎಲ್ಲಾ ವಿಷಯನ ಹೇಳಿ ಅವು ನೋಡ್‌ದ ಗೂಡೆನ ಮದುವೆ ಆಗಿ ಇಬ್ಬರು ಅಮೇರಿಕಾಕ್ಕೆ ಹೋದವೆ.

ಯಾರೋ ಮಾಡ್ದ ತಪ್ಪಿಗೆ ಎರಡ್ ಜೀವಗಳ ಮನಸ್ಸ್ ಹೊಡ್‌ದ್ದ್ ಹೋತ್. ಆದರೆ ಈಗ ಚಿನ್ನಿ ಅಪ್ಪ, ಅವ್ವ ನೋಡ್‌ದ ಹೈದನೊಟ್ಟಿಗೆ ಲಾಯಿಕ್ಕಾಲೆ ಉಟ್ಟ್. ಹಂಗೆ ಹೈದ ಪುಟ್ಟುನು ಅಪ್ಪ, ಅವ್ವ ನೋಡ್‌ದ ಗೂಡೆನೊಟ್ಟಿಗೆ ಲಾಯಿಕ್ಕಾಲೆ ಉಟ್ಟ್.

# ಬೊದ್ಕು ಅಂದ್ ಇಂದ್

– ಉದಯ ಕುಮಾರಿ ಚೆಂಬು

ಈ ಕಾಲ ಬದಲಾದರ ನೋಡ್ರೆ ಮನ್ಸ್‌ನ ಒಳೆಗೆ ಹೇಳಿಕಾಗದಷ್ಟ್ ಬೇನೆ ಆದೆ. ಮನ್ಸ್‌ನ ಒಳೆಗೆ ಹಳೆ ಕಾಲದ ನೆಂಪುಗ ಹುಕ್ಕ್ ಬಂದದೆ. ಜನರ ಜೀವನಂತ ಹೇಳಿರೆ ಬೇರೆ ಬೇರೆ ಮಜಲ್‌ಗಳ ಹಂಗೆ. ಈಗನ ಕಾಲಲಿ ವಿಧಿನ ಆಟಕ್ಕೆ ಪುರುಸೊತ್ತ್ ಇಲ್ಲೆ. ಈ ಬೊದ್ಕುತೇಳುವ ದೋಣಿಲಿ ಹೆಂಗಾರ್ ಮಾಡಿ ಮೀಸೊಕು ಅಲ. ಅದ್ಕೆ ಹುಟ್ಟಿದ ಮೇಲೆ ಕಾಲ ಬಂದಾಂಗೆ ಕೋಲ ಕಟ್ಟಿಕಂಡ್ ಹೋದು. ಮಕ್ಕಳಿಗೆ ಜಲ್ಮ ಕೊಟ್ಟ ಅಪ್ಪ ಅಮ್ಮನ ಮನ್ಸ್‌ಲಿ ನಮ್ಮ ಮಕ್ಕಳ ಹೆಂಗಾರ್ ಮಾಡಿ ಒಳ್ಳೆ ದಾರಿಗೆ ತರಕುತ ಆಸೆ ಇದ್ದೇ ಇದ್ದದೆ. ಎಲ್ಲವು ತಾಯಿ ಹೆರೆಕನ ನಾವು ಚಿಪ್ಪಿನಾರ್ ಹೆರೆಕುತ ಇದ್ದ ಗಾದೆನ ಹಂಗೆ.

ಹಿಂದೆನ ಕಾಲಲಿ ಅಮ್ಮಂದರ ಕೆಲ್ಸತೇಳಿರೆ ಎಂತದ್ ಅದ್ ದೇವ್ರ ಇನ್ನೊಂದು ಮೊರೆನೆ ಅಮ್ಮ. ಅವಳ ಎಲ್ಲಾ ಶ್ರಮನ ಹಾಕಿ ಕೂಸುನ ಬೆಳ್ಸಿದೆ. ಮಕ್ಕಳಿಗೆ ಅಮ್ಮ ಆಗಿ, ಗಂಡಂಗೆ ಹೆಣ್ಣ್ ಆಗಿ, ಅತ್ತೆ ಮಾವಂಗೆ ಸೊಸೆ ಆಗಿ ಜೀವ ಸಮ್ದ್ ಹೋಗುವಾಂಗೆ ದುಡ್ದದೆ. ಯಾರ ಋಣ ತೀರ್ಸಿರು ಅಮ್ಮನ ಋಣ ತೀರ್ಸಿಕೆ ಸಾಧ್ಯ ಉಟ್ಟಾ? ಮನೆನೆ ಸುರುನ ಪಾಠ ಶಾಲೆ ಅಮ್ಮನೆ. ಸುರುನ ಗುರು ತೇಳುವ ಮಾತ್ ಯಾಗೋಳಿಗು ಸತ್ಯ. ಈಗ ತಂಪುನ ಕೋಂಬರೆ ಒಳೆಗೆ ಕುದ್ದ್ ಕಂಪ್ಯೂಟರ್ ಒತ್ತುವ ಮಕ್ಕಳಿಗೆ ಇದೆಲ್ಲ ಹೆಂಗೆ ಗೊತ್ತಾದೆ. ಅಂದ್‌ನ ಕಾಲಲಿ ಹೆಂಗೆತ ಹೇಳ್ರೆ ಬೊಳ್ಪುಂದ ನೇಜಿ ಕೊಯಿಲ್‌ತ ಕೆಲ್ಸ ಸುರು ಆದರೆ ಕಣ್ಣಿಗೆ ಕತ್ತಲಾಕನ ಮುಟ್ಟ ಗದ್ದೆಲೆ ಇರ್ತಿದ್ದೆ. ಇನ್ನ್ ಸಣ್ಣ ಸಣ್ಣ ಮಕ್ಕ ಇದ್ದ ಅಮ್ಮಂದರ ಪಾಡ್ ಹೇಳಿ ಸುಖ ಇಲ್ಲೆ. ಅವ್ಕೆ ಹಾಲ್ ಕೊಡಿಕೆ ಒಂದ್ ಗಳ್ಗೆ ಕೆಲ್ಸ ಬುಟ್ಟ್ ಮನೆಗೆ ಓಡಿ ಬರ್ತಿದ್ದೊ. ಈಗನ ಅಮ್ಮಂದರರಿಗೆ ಪುರುಸೊತ್ತು ಇದ್ದರು ಕೂಡ ಮಕ್ಕಳಿಗೆ ಮಾತ್ರ ಕುಪ್ಪಿ ಹಾಲೇ ಗತಿ.

ಅಂದ್‌ನ ಕಾಲಲಿ ಅಮ್ಮಂದರ್ ಕೆಲ್ಸ ಮುಗ್ಸಿ ಮನೆಗೆ ಬಾಕನ ಕಣ್ಣ್‌ಗೆ ಕತ್ತಲಾದರು ಮತ್ತೆ ಭತ್ತ ಮಿದ್ದ್ ಗಂಜಿ ಮಾಡಿ ಬಾಳೆ ದಂಡ್, ಕೆಸನ ದಂಡ್ ತಂದ್ ಗೈಪ್ ಮಾಡಿ ಉಂಡ್ ಮಲ್ಗ್‌ತ್ತಿದ್ದ ಮನೆಲಿ ಪ್ರಾಯಸ್ತರ್ ಇದ್ದರೆ ಮಕ್ಕಳಿಗೆ ಕಥೆ ಹೇಳಿಕೊಟ್ಟ್‌ಕಂಡ್ ಅವರ ನಿಲ್ಗ್‌ಸ್‌ತ್ತಿದ್ದ. ಆಗ ಯಾವ ಕಾಯಿಲೆ ಕಸನು ಬರ್ತ್ತಿಲ್ಲೆ. ಬಂದರೂ ಕಾಡ್ ಮೊದ್ದು ಚೋಡಿ ನೀರೆ ಸಾಕಾಗಿತ್. ಈಗ ಹಂಗೆ ಎಲ್ಲಿ ನಡ್ದದೆ. ಗ್ಯಾಸ್ಟ್ರಿಕ್‌ಂದ ಸುರು ಆದ ಕಾಯಿಲೆ ಮೊದ್ದು ಇಲ್ಲದ ಕಾಯಿಲೆನ

ವರೆಗೆ ಎತ್ತಿಟು. ಈಗನ ಮಕ್ಕಳಿಗೆ ಉಂಬಕೆ ಗಂಜಿ, ಗಂಜಿಗೆ ಅಕ್ಕಿ ಹೆಂಗೆ ಆದೆತ ಗೊತ್ಲೆ. ಹಾಲ್ ಎಲ್ಲಿಂದ ಬಂದದೆತ ಹೇಳಿರೆ ತೊಟ್ಟೆ ತೋರ್ಸುವ ದಿನ ಬಂದುಟು. ಇಂದ್‌ನ ಮಕ್ಕಳಿಗೆ ಕೈಲಿ ವಿಶ್ವನ ನೋಡಿಕೆ ಗೊತ್ತಿದ್ದರು ಕೈಲಿ ಕತ್ತಿ ಹಿಡಿಯಕೆ ಗೊತ್ಲೆ. ಅಂದೆಲ್ಲ ಗದ್ದೆ ಕೆಲ್ಸ ಮಾಡಿಕಂಡ್ ಓ ಬೇಲೆನ ಕೇಳ್‌ಕನ ಅದುವೆ ಸುಖ ಆಗಿತ್ತ್. ಈಗ ರಿಮೋಟ್ ಹಿಡ್ದ್ ಕೆಬಿಗೆ ವಯರ್ ಸೆಕ್ಕ್‌ಸಿ ಕೇಳುವ ಪದ್ಯಗಳೆ ಜಾಸ್ತಿ ಅಂದ್ ಕೊಟ್ಟಾನ್ ಕೊಡಿವರೆಗೆ ನಡ್ಕಂಡ್ ಹೋಗ್ತಿದ್ದ. ಆದ್ರೆ ಇಂದ್‌ನ ವಾಹನಗಳ ನೋಡ್ರೆ ಅಚ್ಚರಿ! ಆದೆ. ಇಂದ್‌ನ ಅಪ್ಪ ಅಮ್ಮಂದರ್ ಅಂಗ್ಡಿಲಿ ಕಂಡ ಕಂಡ ತಿನ್ಸ್‌ಗಳ ಮಕ್ಕಳಿಗೆ ತೆಗ್ದ್ ಕೊಟ್ಟ್ ಬೊಜ್ಜ್ ಬೆಳ್ಸುವೆ ಹೊರ್ತು ಅವರ ಮೈಲಿ ಯಾವ ಶಕ್ತಿ ಇರ್ದುಲೆ. ಅಂದೆಲ್ಲ ಮಕ್ಕ ಬೊಳ್ಪುಗೆ ಬೇಗ ಎದ್ದ್ ಅವರ ಕೈಲಿ ಆಗುವ ಕೆಲ್ಸಗಳ ಮಾಡ್ರೆ ಇಂದ್ ಪಾಪ ಕೂಸು ಹಂಞ ಹೊತ್ತು ಮಲ್ಗಲಿತ ಬೇಗ ಎದ್ರುಸುವ ಅಭ್ಯಾಸ ಮಾಡ್ಸುದುಲೆ.

ಮುಂದೆಲ್ಲ ಮೊದುವೆ ಆಗುವ ಹಯ್ದ ಗೂಡೆಗಳಿಗೆ ಸಂಬಂಧ ಆಕುತ ಇದ್ದರೆ ಹಿರಿಯವೆ ಬೇಕಾಗಿತ್. ಈಗ ಹಂಗೆಲ್ಲ ಗೂಡೆ ಹಯ್ದನ ಹೈದ ಗೂಡೆನ ದೂರಂದ ನೋಡಿರೆ ಸಾಕ್ ಹಿಂದೆ ಮುಂದೆ ನೋಡದೆ ಮ್ಯಾಚ್ ಆದೆ. ಮತ್ತೆ ಕಷ್ಟಗಳ ಅನ್ಸಗ ಆದೆ. ಮುಂದೆಲ್ಲ ಮನೆ ಮನೆಲಿ ಭಜನೆ ಮತ್ತೆ ಭೋಜನ ಇವು ಒಟ್ಟಿಗೆ ಆತಿತ್ತ್. ಈಗ ಭಜನೆ ಅಷ್ಟಕೆ ಅಷ್ಟೇ ಭೋಜನ ಕೂಡ ಹಂಗೆ ಎಲ್ಲವೂ ಒಟ್ಟಿಗೆ ಭೋಜನ ಮಾಡಿಕೆ ಪಾರ ಕಾದರೆ. ದಾರವಾಹಿಗ ಎಲ್ಲಿ ತೊಪ್ಪಿ ಹೋದೆಂತ ಹೆದ್ರಿಕೆ. ಈಗ ಅಪ್ಪ ಅಮ್ಮ ಹೆಂಗೆತೇಳಿರೆ ಮಕ್ಕ ಲಾಯ್ಕಲಿ ಇರ್ಲಿತ ಬೆಳ್ಸುದು ಹೊರ್ತು ಅವ್ಕೆ ಯಾವ ಕೆಲ್ಸನು ಕೊಡ್ದುಲೆ. ಈಗ ಮಕ್ಕ ದೊಡ್ಡವುಕೆ ಗೌರವ ಕೊಡುವ ಕಾಲ ನಿತ್ತುಟು. ದೊಡ್ಡವೆ ಮಕ್ಕಳಿಗೆ ಗೌರವ ಕೊಡುವ ಕಾಲ ಬಂದುಟು. ಅವ್ಕೂ ಒಂದ್ ಹೆದ್ರಿಕೆ ನಾಳೆಗೆ ನಮ್ಮ ಲಾಯ್ಕಲಿ ನೋಡಿ ಕಣಕುತೇಳುವ ಭಾವನೆಂದ ಅಡಿಲಿ ಇಸಿರೆ ಪಿಜಿನ್ ತಕಂಡ್ ಹೋದು ಮೇಲೆ ಇಸಿರೆ ಕಕ್ಕೆ ತಕಂಡ್ ಹೋದುತ ಗಾದೆನ ಹಂಗೆ ಕಾಲ ಬದಲಾದಾಂಗೆ ಮಕ್ಕಳು ಬದಲಾಗಿ ಹೆತ್ತವುಕೆ ವೃದ್ಧಾಶ್ರಮಗಳ ವಾಸನೆ ಜಾಸ್ತಿ ಆಗ್ತಾಟ್ಟು. ಹೆಚ್ಚಿ ಹೆಚ್ಚಿ ಓದಿಕಂಡ್ ಹೋದಾಂಗೆ ಒಳ್ಳೆ ಒಳ್ಳೆ ಮನ್ಸ್‌ಗ ಜಾಸ್ತಿ ಆಕಾಯ್ತ್ ಆದ್ರೆ ಈಗ ಹಂಗಾತ್ಲೆ ಹೆಚ್ಚಿ ಓದಿ ಸಮಾಜಲಿ ಕೆಟ್ಟ ಕೆಲ್ಸಗಳೆ ಜಾಸ್ತಿ ನಡಿತುಟ್ಟು ಇದರೆಲ್ಲ ನೋಡ್ರೆ ಹಿಂದೆನ ಸಂಪ್ರದಾಯಗ ಎಷ್ಟ್ ಒಳ್ಳೆದಿತ್ತ್‌ತ ಅನ್ಸದೆ ಇರ್ದುಲೆ.

ದುಡ್ಡು ಮಾಡುವ ಹುಚ್ಚಿಲಿ ಪ್ರೀತಿ ಮಮತೆನ ಎಲ್ಲವು ಮರ್ತವೆ. ಇದ್ಕೆ ನಾವುಗಳೇ ಹೊಣೆ ಆದವೆತ ಹೇಳಿರೆ ತೊಪ್ಪಾಕಿಲೆ. ಹಳೆ ಸಂಪ್ರದಾಯನ ಬುಟ್ಟ್ ಹೊಸ್ತಕೆ ಬಾಕನ ಒಂದ್ ಕ್ರಮತ ನಾವು ಮಾಡಿಕಣಕಾಯ್ತ್. ಆಗ ಮಕ್ಕಳಿಗೆ ಕಷ್ಟದ ಬೇನೆ ಆಗಿತ್ತೋ ಏನೊ. ಯಾಗ ನಾವು ಹಿರಿಯವರ ಮಾತಿಗೆ ಬೆಲೆ ಕೊಡದೆ ನಮ್ಮ ಸಂಪ್ರದಾಯಗಳ ಬುಟ್ಟ್ ಹಾಕಿದನೊ ಅಂದ್‌ಂದ ಉಳಿಗಾಲ ಹಂಞ ಕಡ್ಮೆನೆ ಆದೆ. ಉಳಿಗಾಲ ಬೇಕುತಾದರೆ ನಮ್ಮ ಸಂಪ್ರದಾಯಗಳ ಆಚಾರ ವಿಚಾರಗಳ ನಾವು ಹಾಕುವ ಬಟ್ಟೆ ಬೊರಿಗಳ ಕ್ರಮ ಬದ್ಧವಾಗಿ ಇಸಿಕಂಡರೆ ಅಂದ್‌ಂದ ಉಳಿಗಾಲ ಇಲ್ಲದರೆ ಪಶ್ಚತಾಪಕೆ ತಲೆ ಬೊಗ್ಗಿಸೊಕು. ಇದರೆಲ್ಲ ನಾವು ನಾವೆ ಸರಿ ಮಾಡಿಕಂಡ್ ಹೋದರೆ ಕಾಲ ಬದಲಾದರು ಪ್ರೀತಿ ಹಂಗೆನೆ ಇದ್ದದೆ.

# ಅರೆಭಾಷಿಕ ಗೌಡರ ನಂಬಿಕೆಗ

– ಕು. ಕನ್ನಿಕಾಪ್ರಕಾಶ್ ಕೋರನ

ಮನ್‌ಸ ಮತ್ತೆ ಸಮಾಜ ಹಿಂದೆಂದ ಒಪ್ಪಿಕಂಡ್ ಅದನ್ನ ಪಾಲಿಸುತ್ತ ಬರುವ ವರ್ತನೆಗಳ್‌ನ್ನ ನಾವು ನಂಬಿಕೆಗತೇಳಿ ಕರ್‌ದವೆ. ವೈಚಾರಿಕ ವಿದ್ಯಾವಂತರ್ ಭಾವುಕ ದೃಷ್ಟಿ ಹೆಚ್ಚ್ ಇರುವಲ್ಲಿ ನಂಬಿಕೆಗ ಹೆಚ್ಚಾಗಿದ್ದವೆ. ವಿದ್ಯಾವಂತ, ಅವಿದ್ಯಾವಂತ, ಶ್ರೀಮಂತ ಬಡವ, ಮೇಲ್ವರ್ಗ, ಕೆಳವರ್ಗಂತ ವ್ಯತ್ಯಾಸಗ ಇಲ್ಲಿ ಕಡಿಮೆ. ನಂಬಿಕೆಗ ಮನ್‌ಸ್‌ನ ಪರಿಸ್ಥಿತಿಗೆ ಸಂಬಂಧಿಸಿದಾದ್ದರ್‌ಂದ ಅವು ಸಾರ್ವತ್ರಿಕವಾಗಿಟ್ಟು.

ಗೌಡ್ರ್‌ಗ ತಮ್ಮದೇ ಆದ ಕೆಲವು ನಂಬಿಕೆಗಳ್‌ನ ಇಟ್ಟ್ ಕೊಂಡೊಳೊ ಇದ್ ಗೌಡ್ರ್‌ಗಳ ಬದ್‌ಕ್‌ನ ಎಲ್ಲ ಹಂತಲು ವ್ಯಾಪಿಸಿಕೊಂಡ್‌ಟು. ತಮ್ಮ ಪರಿಸರದ ಗುಣಗಳಿಗೆ ಸರಿಯಾಗಿ ಪಶು ಪಕ್ಷಿ, ಹವಾಮಾನ, ಸಂಪ್ರದಾಯನ ಒಳಗೊಂಡ ನಂಬಿಕೆಗೆ ಹುಟ್ಟಿಕೊಂಡುಟು ನಂಬಿಕೆಗೆ ಸಂಸ್ಕೃತಿನ್ ಮೂಲ ಬೇರ್‌ಗ ಇದ್ದಂಗೆ ಇವು ಗೌಡ್ರ್‌ಗಳ ಪ್ರಶ್ನೆ ಆಚಾರ ವಿಚಾರಲಿ ಕಂಡ್ ಬಂದದೆ ಈ ನಂಬಿಕೆಗಳ ಕಾರ್ಯ ಕಾರಣನ ಊಹಿಸುದು ಕಷ್ಟ ಆದರ್ ಅವು ಗೌಡರ ನಿತ್ಯ ಜೀವನದೊಟ್ಟಿಗೆ ಸೇರಿ ಹೋಗುಟು.

ಸಾಮಾನ್ಯ ಆಗಿ ಒಂದು ಗುಂಪು ಜನ ಒಂದು ನಿರ್ದಿಷ್ಟ ಕಾಲ ಘಟ್ಟಲಿ ತೆಗ್‌ದ್‌ಕಂಡ ನಿರ್ಣಯಗ ನಿಧಾನ ಆಗಿ ನಂಬಿಕೆಗ ಆದವೆ. ಕೆಲವೊಮ್ಮೆ ವೈಯಕ್ತಿಕ ನಂಬಿಕೆಗ ಕೂಡ ನಂಬಿಕೆಗಳಾಗಿ ಮಾರ್ಪಟ್ಟವೆ.

ನಂಬಿಕೆಗಳ್‌ನ 'ಜನಪದ ನಂಬಿಕೆ' ಹಂಗೆನೆ 'ಮೂಢನಂಬಿಕೆ' ತೇಳಿ ವಿಭಜಿಸಕ್. ಇಲ್ಲಿ ಜನಪದ ನಂಬಿಕೆಗ ಅವೈಜ್ಞಾನಿಕವಾಗಿದ್ದರೂ ವ್ಯಕ್ತಿ ಅದನ್ನ ಬಲವಾಗಿ ನಂಬಿಕಂಡಿದ್ದೆ. ಹಂಗೆ ಅದ್ ತನ್ನ ಬದ್‌ಕ್‌ಲಿ ಪ್ರಭಾವ ಬೀರ್‌ದೆ ತೇಳಿ ಭಾವಿಸಿಕಂಡರೆ ಅದ್ ಮೂಢನಂಬಿಕೆಯಾದೆ.

ಆದರೆ ಜನಪದ ನಂಬಿಕೆ ಹಂಗೆ ಮೂಢನಂಬಿಕೆ ತೇಳಿ ಗೆರೆ ಎಳ್ದಂಗೆ ವಿಭಜಿಸುದು ಕಷ್ಟ ಮೂಲತಃ ಮನಸ್ಥಿತಿ ಒಂದೇ ಆಗಿದ್ದರೂ ಅವುಗಳ್‌ಲ್ಲಿ ಪ್ರಾದೇಶಿಕತೆನ ಅಂಶನ ನಾವು ಪ್ರತ್ಯೇಕ ಆಗಿ ಗುರ್‌ತಿಸಕ್. ಈ ದೃಷ್ಟಿಂದ ನಂಬಿಕೆಗಳ್‌ನ ಈ ಕೆಳಗಿನಂಗೆ ವಿಭಾಗ ಮಾಡಲಾಗುಟು.

1. ಮನ್‌ಸನ ಶರೀರ ಹಂಗೆ ವೈದ್ಯಕ್ಕೆ ಸಂಬಂದಿಸಿದ ನಂಬಿಕೆಗ
2. ಜೀವನ ಚಕ್ರಕ್ಕೆ ಸಂಬಂಧಿಸಿದ ನಂಬಿಕೆಗ
3. ಆರ್ಥಿಕ ಮತ್ತೆ ಸಾಮಾಜಿಕ ಸಂಬಂಧಗಳ ನಂಬಿಕೆಗ
4. ಮಾಟ ಮತ್ತೆ ಮಂತ್ರ ವಿದ್ಯೆ
5. ಭೂತ ಪ್ರೇತ ಮತ್ತೆ ಇತರ ಅತಿಮಾನವ ಶಕ್ತಿಗಳಿಗೆ ಸಮಬಂಧಿಸಿದ ನಂಬಿಕೆಗ
6. ಸಂಖ್ಯೆಗ ಮತ್ತೆ ಖಗೋಳಕ್ಕೆ ಸಂಬಂದಿಸಿ ನಂಬಿಕೆಗ
7. ಬೇಸಾಯಕ್ಕೆ ಸಂಬಂದಿಸಿದ ನಂಬಿಕೆಗ

ಗೌಡ್ರ್‌ಗಳಿಗೆ ಸಂಬಂಧಿಸಿದಂಗೆ ಈ ಎಲ್ಲಾ ಪ್ರಕರಣಗಳಿಗೂ ಹೊಂದಿಕೊಳ್ಳುವ ನಂಬಿಕೆಗಳ್‌ನ ನಾವು ನೋಡ್ರೆ ಉದಾ:

1. ಹೆಂಗ್‌ಸರಿಗೆ ಬಲಕಣ್ಣ್ ಗಂಡಸರಿಗೆ ಎಡಕಣ್ಣ್ ಹಾರಿಕಾಗದ್
2. ಎಡಕೈಲಿ ಎಂಥರನೂ ತಕಣಿಕಾಗದ್ ಹಂಗೆನೆ ಎಂಥರನೂ ಕೊಡಿಕಾಗದ್
3. ಮಂಗಳವಾರ ಹೆಣ್ಣ್ ಕೂಸು ಹುಟ್ಟಿರೆ ಮನೆಗೆ ಹಾಳ್
4. ಗೂಡೆ ಮೈ ನೆರ್ದ ದಿನ ಮಳೆ ಬಂದರೆ ಗೂಡೆಗೆ ಒಳ್ಳೆ ಗಂಡ ಸಿಕ್ಕಿದೆ.
5. ಬಸ್‌ರಿ ಹೆಣ್ಣ್ ಸತ್ತರೆ ಸುಡಿಕಾಗದ್ ಹೂಳೊಕು
6. ಮನೆಂದ ಹೊರಡ್‌ಕಾಕನ ಎಲ್ಲಿಗೆಂತೇಳಿ ಕೇಳಿಕಾಗದ್
7. ನಾಗರ ಹಾವ್‌ನ ಕೊಲ್ಲಿಕಾಗದ್
8. ಬಿಳಿ ಬಟ್ಟೆನ ಮೈ ಮೇಲೆ ಹೊದ್ದ್‌ಕಣಿಕಾಗದ್

ಹೀಂಗೆ ಗೌಡ್ರ್‌ಗಳ ನಂಬಿಕೆ ಗೌಡ್ರ್‌ಗಳ ಸ್ವಭಾವನ ಅರ್ಥ ಮಾಡಿಕಣಿಕೆ ಸಹಕರಿಸಿದೆ. ಆದರೆ ಇಂದ್ ಆರ್ಥಿಕ ಬೆಳವಣಿಗೆ ಮತ್ತೆ ವಿದ್ಯಾಭ್ಯಾಸ ಹೊಂದಿದ ಕಾರಣ ಗೌಡ್ರ್‌ಗಳ ನಂಬಿಕೆಗೆ ಶಿಥಿಲವಾಗುತುಟ್ಟು ಅಲ್ಲದೆ ವೈಜ್ಞಾನಿಕ ಚಿಂತನಾಶ್ರಮ ಅನೇಕ ಚಿಂತೆಗಳ ಸಡಿಲ ಮಾಡಿಟು.

* * * * *

# ಪೊರ್ಲ್ ಯಾರ್?

– ಎನ್ ಪದ್ಮನಾಭ ಪಾದೆ.

ಈ ಪ್ರಪಂಚಲಿ ದೇವರ್ ಸಸ್ಯಗಳ, ಪ್ರಾಣಿಗಳ, ಪಕ್ಷಿಗಳ, ಜತೆಗೆ ಮನುಷ್ಯರ ಕೂಡಾ ಸೃಷ್ಟಿಸ್ಯೊಲೊ. ಸಸ್ಯವರ್ಗಲಿ, ಹಣ್ಣ್‌ಗಳ, ಹೂ, ಕಾಯಿ, ಬುಡುವ ಗಿಡ ಬಳ್ಳಿಗಳ ಬೇರೆ ಬೇರೆ ಹೆಸರ್‌ಂದ ಕರ್ದವೆ. ಹೂ, ಕಾಯಿ ಬುಡುವ ಎಲ್ಲಾ ಸಸ್ಯವರ್ಗ ಮದ್‌ಮಕ್ಕಳ ಹಾಂಗೆ ಹೆಚ್ಚ್ ಪೊರ್ಲುಲಿ ಕಂಡವೆ. ಈ ಪೊರ್ಲು ವರ್ಷದ ಸುಗ್ಗಿಯ ಕಾಲಲಿ ಹೆಚ್ಚ್. ಈ ಕಾಲನ ಸಂಸ್ಕೃತ ಬಾಸೆಲಿ ವಸಂತ ಋತುಂತ ಕರ್ದವೆ.

ಪ್ರಾಣಿ ವರ್ಗಲಿ ಹೆಚ್ಚ್ ಪೊರ್ಲುನ ಪ್ರಾಣಿ ಯಾದು? ಗಂಡೊ? ಹೆಣ್ಣೊ? ನೋಡಿಕೆ ಹೆಣ್ಣಿಗಿಂತ ಗಂಡ್ ಹೆಚ್ಚ್ ಪೊರ್ಲು. ಒಳ್ಳೆ ಗಟ್ಟಿ ಮುಟ್ಟು, ಗಂಡ್ ಸಿಂಹ, ಗಂಡ್ ಹುಲಿ, ಆನೆ, ಎತ್ತ್ (ಬಸವ) ಇದಕ್ಕೆ ಉದಾಹರಿಸಕ್. ಹೆಣ್ಣ್ ಪ್ರಾಣಿಗ ಗಂಡಿನ ಪೊರ್ಲ್ ನೋಡಿ ಬಂದವೆ.

ಪಕ್ಷಿ ವರ್ಗಲಿ ಕೂಡಾ ಹೆಣ್ಣ್‌ಂದ ಗಂಡ್ ಹೆಚ್ಚ್ ಪೊರ್ಲು. ಗಂಡ್ ಹುಂಜ ಬಣ್ಣದ ಗರಿ, ಜುಟ್ಟ್ ಇದ್ದ್ ಹೆಣ್ಣು ಹೇಂಟೆ ಕೋಳಿಗಿಂತ ಹೆಚ್ಚ್ ಪೊರ್ಲ್. ಗಂಡ್ ನವಿಲ್ ಹೆಣ್ಣ್ ನವಿಲಿಂದ ಹೆಚ್ಚ ಪೊರ್ಲು. ಅದರ ಬಾಲ, ಬಣ್ಣ ಬಣ್ಣದ ಗರಿ ಇದ್ದ್ ಹೆಚ್ಚ್ ಪೊರ್ಲು. ಇದ್ ದೇವರ ಸೃಷ್ಟೀಂತ ಹೇಳಕ್.

ಮನುಷ್ಯ ವರ್ಗಲಿ ಯಾರ್ ಹೆಚ್ಚ್ ಪೊರ್ಲು? ಗಂಡೊ? ಹೆಣ್ಣೋ? ಹೆಣ್ಣೇ ಹೆಚ್ಚ್ ಪೊರ್ಲುಂತ ಹೇಳಕ್. ಗಂಡ್ ಎಷ್ಟೇ ದೊಡ್ಡ ಶೂರ, ಧೀರ ಆದರ್. ಹೆಣ್ಣೇ ಸೊಬಗಿನ ರಾಣಿ. ಗಂಡ್ ಮೈದಾನ್‌ಲಿ ಎಷ್ಟೇ ದೊಡ್ಡ ಹೆಬ್ಬುಲಿ ಆದರ್ ಹೆಣ್ಣಿನ ಮುಂದೆ ಒಂದ್ ಸಣ್ಣ ಇಲಿ.

ಹೆಣ್ಣ್ ಅಬಲೇಂತ ಹೇಳ್ರೂ ಗಂಡಿನ ತನ್ನ ಪೊರ್ಲುಲಿ ತನ್ನ ಹತ್ರ ಸೆಳೆವ ಶಕ್ತಿ ಪಡೆದುಟ್ಟು. ಗಂಡಿಗಿಂತ ಹೆಚ್ಚ್ ಸೊಬಗ್‌ನ ಹೆಣ್ಣ್ ಈ ಲೋಕನ ಆಡಿಸ್ತಾ ಉಟ್ಟು ಹೆಣ್ಣ್, ಮಣ್ಣ್, ಹೊನ್ನು ಇದಕ್ಕಾಗಿಯೇ ಈ ಜಗದಾಟ ನಡೆದಿರುದು ನಮ್ಮ ಪುರಾಣ ಇತಿಹಾಸಗಳಲಿ ಕಂಡದೆ.

ಹೆಣ್ಣ್ ಸರ್ವಾಂಗ ಸುಂದರಿ. ಅವಳ್ ತನ್ನ ಅಂಗಾಂಗ ಸೌಂದರ್ಯಗಳ ಬಹ್ಮನ ಸೃಷ್ಟಿಂದ ಪಡೆದೇ ಬಂದುಟ್ಟು. ತುಳು ನಾಡಿಲಿ ಒಂದು ಸರ್ವಾಂಗ ಸುಂದರಿ ಹೆಣ್ಣ್ ಇತ್ತ್. ನೀವ್ಗೆ ಗೊತ್ತುಟ್ಟೊ? ಅವಳೇ 'ಸತ್ಯನಾಪುರದ ಸಿರಿ'. ಇದ್ ತುಳುನಾಡ ಜಾನಪದದ 'ಸಿರಿಸಂಧಿ' ಪಾಡ್ದನ ಕೇಳ್ರೆ ನೀವ್‌ಗೆ ಗೊತ್ತಾವುದ್.

ಸತ್ಯಾನಾಪುರದ ಪೊರ್ಲ್‌ನ ಹೆಣ್ಣ್ 'ಸಿರಿ' ದಿಕ್ಕ್ ಬುಟ್ಟ್ ದೇಶಾಂತರ ಹೋಕನ ದಾರಿಲಿ ಬೇರೆ ಬೇರೆ ಜಾತಿಯ ಹೆಣ್ಣ್ ಮಕ್ಕ ಕಾಂಬಕೆ ಸಿಕ್ಕಿದೊ. "ಬಂಟರ ಜಾತಿಯ ಹೆಣ್ಣ್ ಮಕ್ಕ ಕಾಂಬಕೆ ಸಿಕ್ಕಿದೊ. ಸಿರಿಯ ಕಷ್ಟ ನೋಡಿ ದುಃಖ ಪಟ್ರೊ. ಸರ್ವಾಂಗ ಸುಂದರಿ ಸರಿ ತನ್ನ ಉಟ್ಟ 'ಸೀರೆಯ ನೆರಿಗೆ'ಯ ಅಂದ ಚಂದ ಕೊಟ್ಟತ್". "ಮುಂದೆ ಹೋಕನ ಬಿಲ್ಲವ ಜಾತಿಯ ಹೆಣ್ಣ್ ಮಕ್ಕ ಕಾಂಬಕೆ ಸಿಕ್ಕಿದೊ. ಅವ್‌ಕೆ ತಾನ್ ಕಟ್ಟಿದ 'ತಲೆ ಸೂಡಿನ' ಸೊಬಗ್ ಕೊಟ್ಟತ್. "ಬ್ರಾಹ್ಮಣ ಜಾತಿಯ ಹೆಣ್ಣ್ ಮಕ್ಕಗೆ ತಾನ್ ಮುಡಿದ 'ದೇವ ಕೇದಗೆ'ಯ ಸೊಬಗ್ ಕೊಟ್ಟತ್". "ಆಚಾರಿ ಜಾತಿಯ ಹೆಣ್ ಮಕ್ಕಗೆ ತಾನ್ ಹಣೆ ಇಟ್ಟ 'ಕುಂಕುಮದ ಬೊಟ್ಟ್' ನ ಪೊರ್ಲ್ ಕೊಟ್ಟತ್. ಚಮಗಾರ ಹೆಣ್ಣ್ ಮಕ್ಕಗೆ ತನ್ನ 'ಕಾಲುಂಗುರದ ಅಂದ ಚಂದ ಕೊಟ್ಟತ್. ಕುಡುಬಿ ಜಾತಿಯ ಹೆಣ್ ಮಕ್ಕಗೆ ತಾನ್ ಮುಡಿದ 'ಚೆಂಡ್ ಮಲ್ಲಿಗೆಯ' ಬೆಡಗನ್ನ್ ಕೊಟ್ಟತ್. ಬೈದರ ಜಾತಿಯ ಹೆಣ್ಣ್ ಮಕ್ಕಗೆ ತಾನ್ ಧರಿಸಿದ 'ನತ್ತ್ ಮೂಗುತಿಯ ಹೊಳಪು ಕೊಟ್ಟತ್.

ಈ ಕ್ರಮಲಿ ಬೇರೆ ಬೇರೆ ಜಾತಿಯ ಹೆಣ್ಣ್ ಮಕ್ಕಗೆ ತನ್ನ ಸೌಂಧರ್ಯದ ಒಂದೊಂದ್ ಭಾಗ ಪೊರ್ಲುನ ಕೊಟ್ಟ್ ತನನ್ ದಾರಿನ ಹಿಡ್ಕಂಡ್ ಮುಂದೆ ಹೋತ್. ಸಿರಿ ಕೊಟ್ಟ್ ಪೊರ್ಲುನ ಭಾಗ್ಯ ಈಗ್ಲೂ ಈ ಹೆಣ್ಣ್ ಮಕ್ಕಗೆ ಉಟ್ಟು. ಇಷ್ಟೆಲ್ಲಾ ಪೊರ್ಲು ಇದ್ದ 'ಸತ್ಯಾನಾಪುರದ ಸಿರಿ' ಅದ್ ಎಷ್ಟ್ ಪೊರ್ಲು ಇದ್ದಿರ್ದು?

* * * * *

# ಪೂಕರೆ

ಮೂಲ : ಡಾ. ಪೂವಪ್ಪ ಕಣಿಯೂರು
ಅನು : ಸಂಜೀವ ಕುದ್ಪಾಜೆ

ಪೂಕರೆ ಕರಾವಳಿ ಜಿಲ್ಲೆಗಾದ ಕಾಸರಗೋಡು, ದಕ್ಷಿಣಕನ್ನಡ, ಉಡುಪಿ ಜಿಲ್ಲೆಲಿ ಭತ್ತದ ಕೃಷಿ ಮಾಡ್‌ಕನ ನಡ್ಸುವ ಒಂದು ಆಚರಣೆ. ಪೂಕರೆ ಗದ್ದೆಗ ಸುಮಾರು ಏಳೂವರೆ ಏಕರೆ ವಿಸ್ತೀರ್ಣದಲ್ಲೂ ಇದ್ದವೆ. ಈ ಗದ್ದೆಗಳ ವಿಸ್ತೀರ್ಣನ ಹೊಂದಿಕಂಡ್ ಹತ್ತ್ ಕಳ್ಸೆ, ಹನ್ನೆರಡ್ ಕಳ್ಸೆ, ನಾಲ್ಕು ಮುಡಿ, ಹನ್ನೆರಡ್ ಮುಡಿ ಗದ್ದೆಗಂತ ಹೇಳಿ ಕರ್‍ದವೆ. ಭೂಮಾಪನ ಸಂಖ್ಯಾದೃಷ್ಟಿಂದ ಭಿನ್ನವಾಗಿ ಈ ಗದ್ದೆಗಳ ನೋಡ್ರೆ ಆಚರಣೆಲಿ ಬಂದಿರುವ ಅಳತೆಗಳ್‌ಂದ ಗುರ್ತಿಸುದು ವಾಡಿಕೆ ಆಗುಟು. ನೆಡುವ ನೇಜಿಗೆ ಇಲ್ಲರೆ ಬಿತ್ತ್ ಹಾಕಿಕೆ ಎಷ್ಟ್ ಭತ್ತ ಬೇಕಂತ ಹೇಳುವ ಅಂದಾಜಿಲಿ ಗದ್ದೆ ವಿಸ್ತಾರನ ಗುರುತಿಸುವ ಬಗೆನ ಕಂಡವೆ. ಭತ್ತ ಬೆಳೆವ ಎಲ್ಲಾ ಗದ್ದೆಗೂ ಪೂಕರೆ ಹಾಕುವ ಕ್ರಮ ಇಲ್ಲೆ. ಕೆಲವು ದೈವ ಸಂಬಂಧಿಸಿದ ವಿಸ್ತಾರವಾದ ಗದ್ದೆಗಳಿಗೆ ಮಾತ್ರ ಪೂಕರೆ ವಿಧಿನ ನಡ್ಸುವೆ. ಪೂಕರೆ ಗದ್ದೆನ ದೈವದ ಗದ್ದೆ (ತುಳು: ದೈವೊದ ಕಂಡೊ) ಕಂಬುಲ ಕಂಡೊ ಹೇಳುವ ರೂಢಿ ಉಟ್ಟು. ಧಾರ್ಮಿಕ ನೆಲೆಲಿ ಪೂಕರೆ ಗದ್ದೆಗೆ ಮಹತ್ವವುಟ್ಟು. ಈ ಗದ್ದೆ ಊರು ದೈವದ ಹೆಸರ್‌ಲಿದ್ದದೆ. ಗದ್ದೆಂದ ಬಾವ ಹುಟ್ಟುವಳಿ ಆ ದೈವದ ಆರಾಧನೆನ ಖರ್ಚಿಗೆ ಸಂದಾಯ ಆದೆ. ಮುಟ್ಟಾದವು, ಬೊಸುರಿ ಹೆಳ್ಮಕ ಮತ್ತೆ ಸೂತಕಲಿರೊವು ಆ ಗದ್ದೆನ ಪುಣಿಯಕ್ಕಲೆ ಹೋಕೆ ಬೊತ್ತ್. ಮದುವೆ ಆಗಿ ಮಕ್ಕ ಆಗದೆ ಇರೊವು ಈ ಗದ್ದೆನ ಸುತ್ತ ಅಕ್ಕಿನ ಹರಂಡಿರೆ ಮಕ್ಕ ಆದವೆಂತ ನಂಬಿಕೆ ಉಟ್ಟು. ಜಾನವಾರ್‌ಗೆ ಸೌಖ್ಯ ಇತ್ಲರೆ ಈ ಗದ್ದೆ ಹೂಡಿಕೆ ಎತ್ತ್‌ಗಳ ಇಳ್ಸುವಂತೇಳಿ ಹರಕೆ ಹೊತ್ತವೆ.

ಪೂಕರೆ ಗದ್ದೆ ಊರ್‌ನ ಗುತ್ತು ಮನೆನ ಯಜಮಾನನ ಕೈಲಿ

ಇದ್ದದೆ. ಧಾರ್ಮಿಕ ನೆಲೆಂದಾಗಿ ಊರೊವು ಎಲ್ಲವೂ ಸೇರಿ ಪೂಕರೆ ಹಾಕುವ ದಿನನ ನಿಘಂಟ್ ಮಾಡುದರ 'ಕುದಿ' ನೋಡುದ್'ಂತ ಹೇಳುವೆ. ಈ ದಿನನ ಬೇರೆ ಬೇರೆ ಹೆಸರಂದ್ ಕರ್ದವೆ. ಪುಂಡಿ ಬಿತ್ತ್ ಹಾಕಿಕೆ ಗದ್ದೆನ ಹೂಡಿ, ಹಲಗೆ ಹಾಕಿ ಸಮತಟ್ಟು ಮಾಡುದರ್'ಂದ ಈ ದಿನನ 'ಕಂಡೊಕೋರುನೆ'ಂತ ಹೇಳುವೆ. ಪೂಕರೆ ಆಚರಣೆ ಸಂಭ್ರಮಲಿ 'ಕೋಳಿಕಟ್ಟ' ನಡಿಯೊದರ್'ಂದ 'ಕಂಡೊದ ಕೋರಿ', ಕೋಣಗಳ ಓಡ್ಸುವ ಆಟ ಇರ್ದರ್'ಂದ ಆದಿನನ 'ಕಂಬಳ ದಿನ' ಎಂದು ಕರ್ದವೆ. ಪೂಕರೆ ಹಾಕುದೇ ಪ್ರಧಾನ ಆಚರಣೆ ಆದ್ದರ್'ಂದ 'ಪೂಕರೆ ದಿನತೆಂಳಿ ಕರ್‍ಯೊದು ವಾಡಿಕೆ. ಪೂಕರೆಲಿ ಮದ್ವೆಗೆ ಸಂಬಂಧಪಟ್ಟ ಆಚರಣೆ ಇರ್ದರ್'ಂದ್ ಇದರ ವಿಶೇಷವಾಗಿ 'ಗದ್ದೆನ ಮದ್ವೆ'ಂತೇಳಿ ಕರ್ದವೆ.

ಪೂಕರೆಗೆ ದಿನ ನಿಘಂಟ್ ಮಾಡುವ ಮುಂದೆನೆ ಗದ್ದೆ ಪುಣಿನ ಕೆತ್ತಿ ಮಣ್ಣು ಮೆತ್ತುವೆ. ಗದ್ದೆನ ಹದ ಮಾಡುವೆ. ಪೂಕಂ ಗದ್ದೆನೆ ಹೂಡುವ ಆಕೆರಿನ ದಿನನ ಪೂಕರೆ ದಿನಂತೇಳ್ವೆ. ಪೂಕರೆ ಹಾಕುವ ಹಿಂದೆನ ದಿನ ಗದ್ದೆ ಪುಣಿಗೆ ಜೇಡಿ ಮಣ್ಣಿನ ಲೇಪನ ಮಾಡುವೆ. ಪುಣಿನ ಮೂಲೆಲಿ ಮತ್ತು ನಡುನ ಭಾಗಲಿ ತ್ರಿಶೂಲಾಕಾರದ ನಾಗನ ಚಿತ್ರ ಬರೆದು ಸಂಕೇತಿಸುವೆ. ಈ ಮೂಲಕ ಪೂಕರೆ ಗದ್ದೆನ ಬೇರೆ ಗದ್ದೆಗಳ್'ಂದ ಪ್ರತ್ಯೇಕ ಮಾಡುವೆ. ಈ ಕಾರ್ಯ ಊರ್'ನ ಮೇರ ಜನಾಂಗದ ಮುಖ್ಯಸ್ಥ 'ಕಾಪಡ' ನೆರವೇರ್ಸಿದೆ.

ಪೂಕರೆ ಆಚರಣೆಯ ಹಿಂದೆನ ದಿನದ ರಾತ್ರಿ ಗುತ್ತು ಮನೆನ ಇಲ್ಲರೆ ಊರ ದೈವದ ಚಾವಡಿಂದ ಕೊಂಬು ವಾಲಗದೊಟ್ಟಿಗೆ ದೈವಗಳ ಬಂಡಾರ ತಂದವೆ. ತಂದ ಬಂಡಾರನ ಪೂಕರೆಗದ್ದೆ ಹಕ್ಕಲೆ ಹಾಕಿದ ಚಪ್ಪರದಡಿಲಿ ಏರ್ಸವೆ. ಈ ಜಾಗೆನ 'ಕೊಡಿಯಡಿ' ಅಂತ ಕರ್ದವೆ.

ಪೂಕರೆ ಗದ್ದೆ ಹಕ್ಕಲೆ ಇಲ್ಲರೆ ಪುಣಿಲಿ ನಾಗಬನ ಇದ್ದದೆ. ಬಂಡಾರ ಏರ್ಸಿದ ಮೇಲೆ ರಾತ್ರೆ ಸುಮಾರ್ ಹತ್ತ್ ಗಂಟೆ ಅಂದಾಜಿಗೆ ನಾಗಂಗೆ ತಂಬಿಲ ಕೊಡುವ ಕ್ರಮ ಉಟ್ಟು, ಇದರ 'ನಾಗಾರ್ಪುನೆ' ಇಲ್ಲರೆ 'ನಾಗ ಕಳೆಪುನೆ ಅಂತ ಹೇಳುವೆ. ಈ ಕಾರ್ಯನ ಯಜಮಾನ ನೆರವೇರ್ಸಿದೆ. ನಾಗಂಗೆ ಹೇಳುವ ಅರಿಕೆನ ನಲ್ಕೆ ಜನಾಂಗದ ಮುಖ್ಯಸ್ಥ ಹೇಳ್ದೆ. ಈ ಸಂದರ್ಭಲಿ ಬಿಲ್ಲವ ಜನಾಂಗದ ಮುಖ್ಯಸ್ಥ ಊರ್ನ ಬೊಂಟ್ರ, ಊರ್ನ ಕೆಲಸಿಗ ಒಟ್ಟಿಗೆ ಇದ್ದ ಸಹಕಾರ ಕೊಟ್ಟವೆ. ನಾಗಂಗೆ ಭಿನ್ನಹ ಮಾಡ್ದ ಮೇಲೆ ಅಕೆರಿಗೆ "ಆಳ್ ಏ.. ಕೂ... ಅಂತ ಕರ್ದವೆ. ಸೇರ್ದ ಜನಂಗ 'ಕೊಳ್ತಿರಿ' (ಸಣ್ಣದೊಂದಿ) ಹೊತ್ತಿಕಂಡ್ 'ಆಳ್.. ಏ.. ಕೂ' ಅಂತ ಹೇಳಿ ಗದ್ದೆ ಸುತ್ತು ಬಂದವೆ. ಮತ್ತೆ ಕೈಲಿದ್ದ ಕೋಲ್ತುರಿನ ಅಲ್ಲಲ್ಲಿ ಗದ್ದೆ ಪುಣಿಲಿ ಕುತ್ತುವೆ. 'ಆಳ್.. ಏ.. ಕೂ..' ಹೇಳ್ದರ 'ಆಲ್ ಪನ್ಪುನೆ' (ಕನ್ನಡ ಜನಕ್ಕೆ ಹೇಳುವುದು) ಅಂತ ಹೇಳ್ವೆ. ಈ ದಿನ ಬೊಳ್ಪುಂದಲೆ ಊರ 'ಅಜಿಲ' (ನಲಿಕೆ)ಮನೆ ಮನೆಗೆ ಹೋಗಿ 'ತೆಂಬರೆ' (ಸಣ್ಣ ಡೋಲು) ನುಡ್ಸಿ ಪೂಕರೆನ ಹೇಳಿಕೆ ಕೊಟ್ಟದೆ. ಊರಿಗೆ ಕೇಳುವ ಹಾಂಗೆ ಗಟ್ಟಿಯಾಗಿ 'ಆಳ್.. ಏ ಕೂ ..'

ಎಂದು ಕರ್ದ್ ಪೂಕರೆ ಆಚರಣೆನ ವಿಧಿವತ್ತಾಗಿ ಊರೊವುಕೆ ಹೇಳುವ ಕ್ರಮ.

ನಾಗನ ತಂಬಿಲ ಆದ ಮೇಲೆ ಅಲ್ಲಿ ಸೇರಿರುವ ಮನ್ಸರ್/ ಕೊರಗರು ಡೋಲು ಹೊಡ್ಕಂಡ್ ಕುಣ್ದವೆ. ಉರಲ್‌ಗಳ ಹಾಡುವೆ. ಹಿಂದೆ ಮನ್ಸರ /ಕೊರಗರ ಕೊಣ್ತ ರಾತ್ರಿಯಿಡಿ ನಡೆಯುತ್ತಿತ್. ಈಗ ಸಾಂಕೇತಿಕವಾಗಿ ಮಾತ್ರ ಕುಣ್ದವೆ. ಪೂಕರೆ ದಿನ ಮನೆ ಮನೆಗೆ ಹೋಗಿ ಕುಣ್ದವೆ. ಆ ದಿನ ರಾತ್ರೆ ಗದ್ದೆ ಪುಣಿಲಿ 'ಕಾಪಡ' ಜಾಗರಣೆ ಕುದ್ರೊಕು. ಇದರ 'ಪನಿಕ್ಕ್ ಕುಲ್ಲುನೆ' (ಕನ್ನಡ– ಇಬ್ಬನಿಗೆ ಕುಳಿತಿರು) ಅಂತ ಹೇಳುವೆ. ಆ ಸಂದರ್ಭಲಿ ಇಬ್ಬನಿ ಬೀಳುವ ಸಂದರ್ಭ ಆದರ್‌ಂದ ಅದರ ಅನ್ವರ್ಥವಾಗಿ ಗುರುತಿಸುವೆ. ಗದ್ದೆ ಪುಣಿಲಿ ಇಬ್ಬನಿಗೆ ಕುದ್ರುವ 'ಕಾಪಡ'ಂಗೆ ಯಜಮಾನ 'ಕಳಿ ಖರ್ಚಿ'ನ (ಹೆಂಡದ ಖರ್ಚಿಗೆ) ಲೆಕ್ಕಲಿ ಮೂರು ಸೇರು ಭತ್ತ ಕೊಟ್ಟವೆ.

ಪೂಕರೆ ದಿನ ಬೊಳ್ಪಿಗೆ ಗುತ್ತಿನ ಮನೆನ 'ಕುದಿ ಎತ್ತ್‌ಗಳ ಗದ್ದೆಗೆ ಕೊಂಬು ವಾಲಗದೊಟ್ಟಿಗೆ ಇಳ್ಸುವೆ. (ಆರಂಭದಲ್ಲಿ ಇಳಿಯುವ ಜೋಡೆತ್ತುಗಳು) ಇವು ವರ್ಷಕ್ಕೊಮ್ಮೆ ಸರದಿಲಿ ಪೂಕರೆ ಗದ್ದೆಗೆ ಮಾತ್ರ ಹೂಡಿಗೆ ಇಳ್ಸುವ ಎತ್ತುಗ ಆಗಿದ್ದವೆ. ದೈವದ ಎತ್ತ್‌ಗಂತ ಪ್ರತ್ಯೇಕವಾಗಿ ಇದರ 'ಕುರಿ ಎತ್ತ್‌ಗ' ಅಂತ ಗುರುತ್ತಿಸುವೆ. ಗದ್ದೆಗೆ ಇಳಿವ ಜೋಡೆತ್ತುಗ ಮೂರು ಸುತ್ತು ಬಂದ್ ಆ ದಿನದ ಉಳುಮೆ ಕೆಲ್ಸ ಸುರು ಆದೆ. ಆ ಎತ್ತುಗ ಪೂಕರೆ ಹಾಕುವ ಕಾರ್ಯ ಮುಗಿವವರೆಗೆ ಗದ್ದೆನ ಒಂದು ಮೂಲೆಲಿ ಇದ್ದವೆ. ಈ ಎತ್ತುಗಳ ಗದ್ದೆಗೆ ಇಳ್ಸಿಸುವ ಕೆಲ್ಸನ ಗುತ್ತು ಮನೆಗೆ ಮೂಲಂದಲೇ ಆಳಾಗಿ ಕೆಲ್ಸ ಮಾಡುವ 'ಮನ್ಸ/ ಮೂಲ ದ್ರಾವಿಡ ಜನಾಂಗದ ವ್ಯಕ್ತಿ 'ಬೊಟ್ಯದ'ನಾಗಿದ್ದದೆ. ಪೂಕರೆ ದಿನ ಮಾಡುವ ಉಳುಮೆ ಆಕೇರಿದಾಗಿದ್ದ್, ಇದ್ ದೈವದ ಗದ್ದೆ ಆದ್ದರ್‌ಂದ್ ಕಟ್ಟಲೆ ಪ್ರಕಾರ ಊರಿನ ಪ್ರತಿ ಮನೆನ ಜೋಡು ಎತ್ತ್, ಕೋಣಂಗ ಹೂಡಿಕೆ ಇಳ್ದವೆ. ಒಂದು ಕಡೆ ಗದ್ದೆ ಕೋರುವ/ ಹದ ಮಾಡುವ ಕೆಲ್ಸ ನಡ್ದರೆ ಇನ್ನೊಂದ ಕಡೆ ಪೂಕರೆ ಕಂಬದ ತಯಾರಿ ನಡ್ದದೆ.



ಪೂಕರೆ ಆಕಾರ ಮತ್ತೆ ರಚನೆಲಿ, ಪ್ರಾದೇಶಿಕ ವ್ಯತ್ಯಾಸ ಇರುದು ಕಂಡದೆ. ಬೆಳ್ತಂಗಡಿ ಪ್ರದೇಶಲಿ ಪೂಕರೆ ಕಂಬನ ಬಂಡಿನ ಮೇಲೆ ನೆಡುವ ಕ್ರಮ ಆದರೆ, ಪುತ್ತೂರು, ಸುಳ್ಯ ಪ್ರದೇಶಲಿ ಪೂಕರೆ ಕಂಬನ ಮಾತ್ರ ಗದ್ದೆಲಿ ನೆಡುವ ರೀತಿನ ನೋಡುಕ್, ಬೆಳ್ತಂಗಡಿ ಪ್ರದೇಶಲಿ ಪೂಕರೆ ಆಕಾರ ಮತ್ತು ರಚನೆನ ದೃಷ್ಟಿಂದ ಸುಮಾರಾಗಿ ಜಾತ್ರೆನ ರಥದ ಹಾಂಗೆ ಕಂಡದೆ. ಜೋಡಣೆ ಮತ್ತೆ ಅಲಂಕರಿಸುವ ಕ್ರಮಂದ ಸ್ಪಷ್ಟವಾದ ವ್ಯತ್ಯಾಸ ಉಟ್ಟು. ಇದ್ ಕಲ್ಲಿನ ನಾಕ್ ಚಕ್ರಂದ ಕೊಡಿದ್ದ್, ಆರ್ ಅಡಿ ಅಗಲ, ನಾಲ್ಕ್ ಅಡಿ ಎತ್ತರದ ಬಂಡಿಯಾಗಿದ್ದರೆ; ಹಲಗೆ ಮತ್ತು ಆಧಾರಕ್ಕೆ ಮರದ ಕಂಬಗಳ ಹೊಂದ್ಸಿಸುವೆ. ಮರದ ಜೋಡಣೆಯಿಂದಾದ ಪೂಕರೆನ ಕಲ್ಲ್‌ನ ಚಕ್ರಗ ಕೆಸರ್‌ಂದ ಹಾಳ್ ಆಗದಂಗೆ ಆದರ್ಸುವೆ. ಬಂಡಿನ ನಾಲ್ಕ್ ಅಡಿ ಎತ್ತರದ ಸಮತಟ್ಟ್ ಭಾಗದ ಮಧ್ಯಲಿ ಏಳ್ ಕೋಲಿನಷ್ಟ್ ಎತ್ತರದ ಕಂಬನ ಹೊಂದ್ಸುವೆ. ಕೊಡಿ ಮರದಂಗೆ ಈ ಲಂಬಾಕಾರದ ಕಂಬನ ಕೊರ್ದ ಬಿದಿರ್‌ನ ಇಲ್ಲರೆ ಕಮ್ಮನ ಪಟ್ಟಿಗಳಂದ ತ್ರಿಕೋನಾಕಾರದಲ್ಲಿ ನಿರ್ದಿಷ್ಟ ಅಂತರಲಿ ಅಂಕಣನ ರಚಿಸುವೆ. ಕಂಬನ ತುದಿಲಿ ಹತ್ತಿ ಇಲ್ಲರೆ ಪೊಂಗಾರೆ ಮರಂದ್ ಮಾಡ್ದ ಮುಗುಳಿನ (ಕಳಸ) ಜೋಡ್ಸುವೆ. ಈ ಮುಗುಳಿನ ಬಳಿ ಬಟ್ಟೆಂದ ಮುಚ್ಚಿ ಕಟ್ಟುವೆ

ಸುಳ್ಯ ಪುತ್ತೂರ ಭಾಗಲಿ ಈ ಬಗೆನ ಬಂಡಿಯಾಕಾರದ ಪೂಕರೆಗ ಕಂಡ್‌ಬಾದ್ ತುಂಬಾ ಕಡಿಮೆ. ಈ ಪ್ರದೇಶಲಿ ತ್ರಿಕೋನ ಅಂಕಣಗಳಂದ ಕೂಡ್‌ದ ಲಂಬಾಕಾರದ ಕಂಬನ ಕಮ್ಮುಂದ ತಯಾರ್ ಮಾಡ್ವೆ. ಇದರ ಗದ್ದೆನ ನಡುಲಿ ಆಧರಿಸಿ ನೆಡಿಕೆ ಕೆಸರ್ಲಿ ದಂಬೆಕಲ್ಲನ ಹಾಕುವೆ. ಇದರ ಆಧಾರಲಿ ಪೂಕರೆ ಆಧರಿಸಿ ನಿಂತದೆ. ಎಲ್ಲಾ ಪೂಕರೆ ಗದ್ದೆಗಳಿಗೂ ಒಂದೇ ಬಗೆನ ಪೂಕರೆಗಳ ನೆಡ್ದುಲ್ಲೆ. ಪೂಕರೆಲಿ ಇಂತಿಷ್ಟೆ ತ್ರಿಕೋನಾಕಾರದ ಗೆಣೆಗ ಇರೊಕುಂತ ಹೇಳುವ ನಂಬಿಕೆ ಉಟ್ಟು. ಆ ಪ್ರಕಾರ ಪೂಕರೆಗ ಏಳ್, ಒಂಭತ್ತ್, ಹನ್ನೆರಡ್ ಹಿಂಗೆ ಮುಗುಳಿ ಸಂಖ್ಯೆನ ಅಂಕಣ ಗೆಣೆಗಳ ಹೊಂದಿದ್ದ್, ಎತ್ತರಲಿ ವ್ಯತ್ಯಾಸ ಹೊಂದಿದ್ದವೆ.. ಪೂಕರೆನ ಸುರುನ ಗೆಣೆನ ತೊಟ್ಟಿಲ ಗೆಣೆ ಎಂದ್ ಪ್ರತ್ಯೇಕವಾಗಿ ಗುರುತಿಸುವೆ.

ಊರ ಆಚಾರಿ ಪೂಕರೆನ ಮಾಡುವ ಸಂಪ್ರದಾಯ, ಪೂಕರೆ ಅಂಕಣನ ಅರಿಸಿನ, ಬಿಳಿ, ಕೆಂಪು ಬಣ್ಣದ ಹೂಗಳಿಂದ ಅಲಂಕಾರ ಮಾಡುವೆ. ಹಿಂಗಾರನ ಅಂಕಣಗಳಿಗೆ ಕಟ್ಟಿ ಬೇರೆ ಹೂಗಳ ಮಾಲೆ ಮಾಡಿ ಇಡೀ ಕಂಬಕ್ಕೆ ಸುತ್ತುವೆ. ಇ ಅಲಂಕರಣ ಕಂಬಕ್ಕೆ ಒಂದು ಪೊರ್ಲುರ್ಜ ಬಂದದೆ. ಪೂಕರೆನ ಹೂಮಾಲೆ ಅಲಂಕರಿಸುವ ಕಾರ್ಯನ ಊರ್ ನ ಕೆಲಸಿಗ ಮಾಡ್ದೆ. ಹೂವ ತಾವ ಕೆಲ್ಸ ಅವನದ್ದೆ ಆಗಿದ್ದದೆ.

ಪೂಕರೆನ ಹಿಂದೆನ ರಾತ್ರೆ ನಾಗಂಗೆ ತಂಬಿಲ ಕೊಡುವ ಕ್ರಮ ಸರ್ವೇ ಸಾಮಾನ್ಯವಾಗಿ ಎಲ್ಲಾ ಕಡೆನೂ ಕಂಡ್ ಬಂದದೆ. ಗದ್ದೆ ಹೂಡ್ದ ಮೇಲೆ ಪೂಕರೆ ನೆಡುವ ಸುರುಗೆ ದೈವಗಳಿಗೆ ಕೋಲ ನಡ್ದದೆ. ಈ ಸಂದರ್ಭಲಿ ಆರಾಧನೆ ಮಾಡ್ವ ದೈವಗ ಬೇರೆ ಬೇರೆಯಾಗಿದ್ದ್ ಪ್ರಾದೇಶಿಕ ವ್ಯತ್ಯಾಸ ಕಂಡ್ ಬಂದದೆ. ಪುತ್ತೂರು

ತಾಲೂಕಿನ ಇರಂತಜೆಲಿ ಸುರುಗೆ ಹನುಮಂತನ ಕೋಲ ನಡ್ದದೆ. ಇದೇ ತಾಲೂಕಿನ ಕೆದಂಬಾಡಿ, ಸವಣೂರುಗಳಲ್ಲಿ ಬಿರಣ, ಉರವ, ನಾಗಚಾಮುಂಡಿ, ಎರುಕೋಲಗ ನಡ್ದದೆ. ಬೆಳ್ತಂಗಡಿನ ಕೆಲವು ಜಾಗಲಿ ಕೊರಗ ತನಿಯ ದೈವಕ್ಕೆ ಕೋಲ ನಡ್ದದೆ. ಇನ್ ಕೆಲವು ಜಾಗೆಲಿ ಮಲೆದೈವಗಳ ಆರಾಧನೆ ನಡ್ದದೆ. ಕೆಲವು ಕಡೆ ಬಿರಣ ಕೋಲ, ಉರವ ಕೋಲದೊಟ್ಟಿಗೆ ಬಂಗಾರ್ದ ಅಜ್ಜಿಗೆ ಕೋಲ ನಡ್ದದೆ. ಇದರ ಪರ್ಯಾಯವಾಗಿ ಕುದುರೆ ಕೋಲಂತ ಹೇಳಿ ಕರ್ದವೆ.

ಪೂಕರೆ ಆಚರಣೆಲಿ ಆರಾಧನೆ ಮಾಡುವ ಯಾವ ದೈವಗಳಿಗೂ ಸಂಧಿ ಪಾಡ್ದನಗಳಿರುವ ಮತ್ತು ಹಾಡುವ ಕ್ರಮ ಇಲ್ಲೆ.

ಬಿರ್ಮೆರ್ ಮತ್ತು ಉರವ ದೈವಗಳು

ಬಿರಣ ಮತ್ತು ಉರವ ಕೋಲಲಿ ವಿಶೇಷವಾದ ಅಲಂಕಾರ ಇರ್ದುಲೆ. ಬಿರಣ ಕೋಲ ಕಟ್ಟುವ ತಲೆಗೆ ಬಿಳಿ ಬಟ್ಟೆನ ಮುಂಡಾಸು ಮತ್ತೆ ಕಚ್ಚೆ ಹಾಕಿದೆ. ಕೈಲಿ ಒಂದು ದೊಣ್ಣೆ ಇದ್ದದೆ. ಬಾಳೆ ಬಳ್ಳಿನ ಜನಿವಾರ ಹಾಕಿದೆ. ಉರವಂಗೆ ದೈವಕಟ್ಟುದು ಹೈದಂಗ. ಬಿಳಿ ಅಂಗಿ ಮತ್ತೆ ಕೆಂಪು ಸೀರೆನ ಅಡ್ಡಕ್ಕೆ ಸುತ್ತಿ ಕಟ್ಟುವೆ. ತಲೆಗೆ ಕೇಪುಲ ಹೂವಿನ ಮಾಲೆ ಇದ್ದದೆ. ಕಾಲಿಗೆ ಗಗ್ಗರ ಇದ್ದದೆ. ಮೊರೆಗೆ ಬಣ್ಣ ಹಾಕುದುಲೆ. ಈ ದೈವಗ ಗದ್ದೆಗೆ ಸುತ್ತು ಬಂದವೆ. ನರ್ತನ, ಕುಣ್ತಗ ಇಲ್ಲೆ. ಬಿರಣ ಕೋಲದ ಹಿನ್ನಲೆಲಿ ಐತಿಹ್ಯ ಉಟ್ಟು. ಆ ಪ್ರಕಾರ ಆ ಕೋಲಗ ನಡ್ದವೆಂತ ಜನ ಅಭಿಪ್ರಾಯ ಪಟ್ಟವೆ.

ಎರುಕೋಲನ ಕಟ್ಟುವ ಕಲಾವಿದ ಬಣ್ಣ ಬಟ್ಟೆಗಳಿಂದ ಅಲಂಕಾರಗೊಂಡದೆ, ಹಿಂದೆಗೆ ಕೆಂಪು ಬಟ್ಟೆಂದ ಮಾಡಿದ ಸರಳ ರೂಪದ 'ಅಣಿ' ಇದ್ದದೆ. ಎತ್ತಿನ ಮೊರೆನ ಮುಖವಾಡ ಹಾಕಿದೆ. ಗದ್ದೆಗೆ ಸುತ್ತು ಬಾಕನ ಎದರ್ ಮೇರ ಜನಾಂಗದ ಮುಖ್ಯಸ್ಥ 'ಕಾಪಡ' ಕೋಲ್ ಹಿಡ್ಕಂಡ್ ಹೋದೆ.

ಪೂಕರೆ ಸಂದರ್ಭಲಿ ವಿಶೇಷವಾಗಿ ಕಂಡು ಬರುವ ಕೋಲ ಬಂಗಾರ್ದ ಅಜ್ಜಿನ (ಸ್ತ್ರೀ ಭೂತ) ಕೋಲ. ಈ ಕೋಲಲಿ ಕುದುರೆನ ಮೇಲೆ ಪೂಕರೆ, ಚಿನ್ನದ ಪೆಟ್ಟಿಗೆ ಇತ್ಯಾದಿಗಳ ನಾನ ರೀತಿ ಅನುಕರಣೆನ ಅಭಿನಯಿಸುವೆ. ಪೂಕರೆ ಸಂದರ್ಭದ ಬಿರಣ, ಉರವ, ಎರು ಕುದುರೆ ಕೋಲಗೆಲ್ಲ ವ್ಯಕ್ತಿ ಪ್ರಾಣಿಗಳ ಅನುಕರಣೆ ಮಾಡುವ ರೀತಿನ ವ್ಯಕ್ತಪಡಿಸುವೆ.

ಸರಿ ಸುಮಾರು ಮಧ್ಯಾಹ್ನದ ಹೊತ್ತಿಗೆ ಗದ್ದೆ ಹೂಡುವ ಕೆಲ್ಸ ಮುಗ್ದದೆ. ಇನ್ನೊಂದು ಕಡೆ ಈ ಹೊತ್ತಿಗೆ ಪೂಕರೆನ ತಯಾರಿ ನಡ್ದದೆ. ಹೂಡಿಕೆ ಬಂದ ಕೋಣಗಳ ಗದ್ದೆಲಿ ಓಡ್ಸುವೆ. ಎತ್ತುಗಳ ಸಹ ಓಡ್ಸುವೆ. ಈ ಓಟ ಸ್ಪರ್ಧೆಗಾಗಿ ನಡೆಯದೆ ಕುಶಾಲಿಗಾಗಿ ನಡ್ದದೆ. ಇನ್ನೊಂದು ಪಕ್ಕಲಿ ಕೋಣಗಳಿಗೆ ಹಲಗೆಗಳ ಕಟ್ಟಿ. ಗದ್ದೆನ ತಟ್ಟ್ ಮಾಡುವ ಕೆಲ್ಸ ನಡ್ಕಕಂಡ್ ಇದ್ದದೆ.

ಬಂಡಾರ ಏರ್ಸಿ 'ಕೊಡಿಯಡಿ' ಮುಂದೆ ಅಲಂಕಾರ ಮಾಡ್ದ ದೈವಗ ಸೇರಿರುವ ಹಿರಿಯ ಯಜಮಾನರ ಎದ್‌ರ್ 'ನುಡಿ' ಹೇಳುವೆ. ಪ್ರಾರ್ಥನೆ ಮಾಡ್ದ ಮೇಲೆ

ಪೂಕರೆ ಗದ್ದೆಗೆ ಸುತ್ತು ಬಾವ ಕ್ರಿಯಾವಿಧಿಗ ನಡ್ದವೆ. ಗದ್ದೆಗೆ ಸುತ್ತು ಬಾವ ಕ್ರಿಯೆಗೆ 'ತೆಂಬರೆ'ನ ಹಿಮ್ಮೇಳ ಇದ್ದದೆ. ದೈವ ಕಟಂಬ್ವ ನಲಿಕೆ ಜನಾಂಗದಂವ ಆಗಿದ್ದದೆ. ದೈವಗಳ ಕೋಲ ಆದ ಮೇಲೆ ಪೂಕರೆ ನೆಡುವ ಕಾರ್ಯ ನಡ್ದದೆ.

ಬಂಡಾರ ಏರ್ಸಿ ಕೊಡಿಯಡಿ ಎದುರಿಲ್ಲಿ ಸಿಂಗಾರ ಮಾಡ್ದ ಪೂಕರೆಗೆ ಗುತ್ತು ಮನೆನ ಯಜಮಾನ ಊರ ಪ್ರಮುಖರ, ಊರ ಬೊಂಟ್ರ, ಊರ ಮಾಡ್ಯಾಳ, ಕೆಲ್ಸಿ, ಆಚಾರಿ, ಕಾಪಡ ಹಿಂಗೆ ಎಲ್ಲವೂ ಅಕ್ಷತೆ ಹಾಕಿ ಹಾಲೆರ್ದ್ ದೈವನ ಪ್ರಾರ್ಥಿಸುವೆ. ಬಂಡಿ ಸಮೇತ ಪೂಕರೆ ಆದರೆ ಎಲ್ಲವೂ ಸೇರಿ ಗದ್ದೆನ ನಡು ಭಾಗಕ್ಕೆ ಎಳ್ದೆ ತಂದವೆ. ಕಂಬ ರೂಪಲಿ ಇದ್ದರೆ ಹೊತ್ಕೊಂಡ್ ಹೋದವೆ. ಪೂಕರೆನ ನಡು ಜಾಗೆಗೆ ಸಾಗ್ಸಕನ ಮುಂದೆ ಊರ ಮೊಡ್ಯಾಳ ಬಿದಿರ್‌ನ ಗೊಟ್ಟಲಿ (ಬಿದಿರಿನ ಹಂಡೆ) ಹಾಲ್‌ರ್‌ದ್‌ಕಂಡ್ ಹೋದೆ. ಈ ದೃಶ್ಯ ದಿಬ್ಬಣ ಹೋದರ ನೆಂಪಿಗೆ ತಂದದೆ.

ಗದ್ದೆ ನೊಡುಲಿ ನೆಟ್ಟ ಪೂಕರೆನ ಕೊಡಿ ಭಾಗ ಯಾವ ಕಡೆಗೆ ಮಾಲಿಕಂಡ್ ಇದ್ದದೆ ಅಂತ ಜನ ನೋಡುವೆ. ಮತ್ತೆ ಈ ಸರ್ತಿ ಅದ್ ಮಾಲ್‌ದ ದಿಕ್ಕಿಲಿ ಬೆಳೆ ಲಾಯಿಕ್ಕ್‌ಲಿ ಬಂದದೆಂತ ಮಾತಾಡಿ ಕಂಡವೆ. ಗದ್ದೆಂದ ಹಿಂದೆ ಬಾಕನ ಓಡಿಕಂಡ್ ಬಂದವೆ.

ಪೂಕರೆ ಹಾಕುವ ಕ್ರಮ ಮುಗಿಯಕಾಕನ ಸುಮಾರ್ ಮಧ್ಯಾಹ್ನ ಮೂರು ಗಂಟೆ ಆದೆ. ಪೂಕರೆ ಹಾಕಿದ ಮೇಲೆ ಆ ದಿನ ಗದ್ದೆಲಿ ಯಾವ ಕೆಲ್ಸ ಕಾರ್ಯಗ ನಡಿದೊಲೆ. ಬಿತ್ತ್ ಹಾಕುವ ಇಲ್ಲರೆ ನೇಜಿ ನೆಡುವ ಕೆಲ್ಸ ಮೊರ್ದ್ದುನ ನಡ್ದದೆ. ಪೂಕರೆ ದಿನ ಗದ್ದೆನ ಯಜಮಾನನ ಮನೆಲಿ ಎಲ್ಲಾವುಕ್ಕೂ ಊಟದ ವ್ಯವಸ್ಥೆ ಇದ್ದದೆ.

ಪೂಕರೆ ಆಚರಣೆಲಿ ಚಿನ್ನದ ಪೆಟ್ಟಿಗೆನ ಮೆರವಣಿಗೆನ ಅನುಕರಣೆ, ಪೂಕರಣೆನ ಅಲಂಕಾರ ಹಳದಿ ಹೂವುಗಳ್‌ಂದ ಮಾಡ್ದು, ಪೂಕರೆನ –ಸುರುನ ಅಂಕಣನ ತೊಟ್ಟಿಲಂಕಣ ಅಂಥ ಹೇಳ್ದು, ಆಚರಣೆನ  ಗದ್ದೆನ ಮೊದುವೆ ಅಂಥ ಹೇಳ್ದು, ಮದ್ವೆ ಆದವು ಗದ್ದೆಗೆ ಇಳ್ದ್ ಅಕ್ಕಿನ ಹರ್ದ್‌ದು ಇದರ್‌ಂದ ಅವ್ಕೆ ಮಕ್ಕ ಆದವೆಂಥ ಹೇಳ್ವ ನಂಬಿಕೆ ಇರ್ದು. ಸರ್ಪ ಪೂಕರೆ ಗದ್ದೆಲಿದ್ದ ಬೆಳೆನ ರಕ್ಷಣೆ ಮಾಡ್ದೆಂತ ಹೇಳ್ದು, ಗದ್ದೆನ ಯಜಮಾನ ನಾಗಂಥ ಹೇಳ್ದು ಎಲ್ಲವೂ ಫಲವಂತಿಕೆಯ ಸಂಕೇತವಾಗುಟು ಭೂಮಿ ಕ್ಷೇತ್ರದ ಸಂಕೇತವಾಗಿ ಗ್ರಹಿತವಾದರೆ, ನಾಗ ಪುರುಷ ಸಂಕೇತವಾಗುಟು. ಗಂಡ್ ಹೆಣ್ಣ್ ಸೇರ್ದು ಸೃಷ್ಟಿಗೆ ಕಾರಣವಾದೆ. ಮದ್ವೆಂತೇಳ್ದು ಗಂಡು ಹೆಣ್ಣಿನ ಸೇರಿಕೆಗೆ ಸಾಮಾಜಿಕ ಒಪ್ಪಿಗೆ. ಇದೆಲ್ಲಾ  ಪೂಕರೆಲಿ ನಾಗಾರಾಧನೆ ಮತ್ತ್ ಪೂಕರೆ ನೆಡುವ ಮೂಲಕ ಸಂಕೇತಿತವಾಗುಟು.. ಈ ಮೂಲಕ ಪೂಕರೆ ಫಲವಂತಿಕೆನ ಆಶಯ ಬಿಂಬಿಸಿದೆ.

* * * * *

ಲಲಿತ ಪ್ರಬಂಧ

# ಉಗ್ಗಪ್ಪ... ನೀವು ಮೊದ್ವೆಗೆ ಹೋಗಿದರಿಗಡ ... ಗಮ್ಮತ್ತಾ..?

– ಭವಾನಿಶಂಕರ ಅಡ್ತಲೆ

ಒಕ್ಕೊ... ಒಕ್ಕೊ... ಒಕ್ಕೊ.... ಕ್ಕೊ...ಕ್ಕೊ ... ಅಮ್ಮಾ... ಅಣ್ಣಿ ಅಜ್ಜ ಮನೆ ಚಿಂಟೇಲಿ ಕುದ್ದ್ ಕೆಮ್ಮಿಕ್ಕೆ ಶುರು ಮಾಡ್ರೆ ಉಸ್‌ರ್ ತೆಕ್ಕಂಕು ಅದುಲೆ...ಎರಡ್ ಸರ್ತಿ ಕೆಮ್ಮುನೊಟ್ಟಿಗೆ ಹಿಂದೆಂದ ಶಬ್ದ ಕೇಳ್ದ್ ಅಜ್ಜಂಗೂ ಗೊತ್ತಾತ್ತ್ಲೆ...ಎನ್ ಉಗ್ಗಪ್ಪ.. ಡಮ್ಮು ಕಟ್ಟಿ ಕೆಮ್ಮುತೊಳೊರಿ, ಅಡಿಕೆ ಹೊಳ್ ತಲೆಗೆ ಹತ್ತಿತ್ತಾ ಹೆಂಗೆ? ಇ...ಇಲ್ಲೇ...ಒಕ್ಕೊ.. ಮಕ್ಕಳೇ ಅಡ್ಕೆ ಸೊಂರ್‌ಂಕಾನೂ ಹತ್ತಿತ್ಲೆ ಎಂತ ಮಣ್ಣಂಗಟ್ಟಿನೂ  ಇಲ್ಲೆ. ಹಾಳಾದ ಮೊದ್ವೆಗೆ ಹೋಗಿ ಐಸ್‌ಕ್ಯಾಂಡಿ ತಿಂದದ್‌ದೊಂದು ಗೊತ್ತುಟ್ಟು.  ಅದರ್‌ಂದ ಮೇಲೆ ಹೀಂಗೆ.. ಪುರುಸೋತ್ತೇ ಇಲ್ಲೆ. ಮೊದುವೆಲಿ ಐಸ್ ಕ್ಯಾಂಡಿ ಕೊಡ್ದುಲೆ ಉಗ್ಗಪ್ಪ ಐಸ್‌ಕ್ರೀಂ ಕೊಡ್ದು.. ದೊಡ್ಡ ಪಿಳ್ಳಿ ಹೇಳಿ ನೆಗಾಡ್ತ್. ಎಂತ ಕಿಚ್ಚಿಗೆ ಹೆಟ್ಟಿದೊ ಹಾಲ್‌ನಾಂಗೆ ಗಟ್ಟಿಲಿ ಇತ್ತ್.

ಹೇಳ್ದಾಂಗೆ  ನೀವು ಹಾಲ್‌ಗೆ ಮದುವೆಗೆ ಹೋಗಿದರಿಗಡ ಉಗ್ಗಪ್ಪ..ಗಮ್ಮತ್ತಾ..? ಸಣ್ಣ ಪಿಳ್ಳಿ ಕೇಳ್ತ್.

ಗಮ್ಮತ್ತಾ...? ಒಮ್ಮೆ ಹೇಳಿರೆ ಸಾಕಾ? ನಿನ್ನ ಅಪ್ಪ ಇಲ್ಲದಕ್ಕೆ ನಾ ಒತ್ತಾಯಕೆ ಹೋದ್. ಇನ್ ನನ್ನ ಜನ್ಮಕ್ಕೆ ಸಾಕ್. ಮದುವೆನೂ ಬೇಡ. ಮುಂಜಿನೂ ಬೇಡ. ಮುಂಜಿತೆಂಳಿರೆ ಅದೆಂತ ಉಗ್ಗಪ್ಪ? ಸಣ್ಣ  ಪಿಳ್ಳಿ ವಾಪಸ್ ಕೇಳ್ತ್. ಅದೆಲ್ಲಾ ನಮ್ಮದಲ್ಲ. ಮಾಪ್ಳೆಗಳ್ದ್.. ಅದ್ ನಿಂಗೆ ಬೇಡ. ಮಾತಿಗೆ ಹೇಳ್ದ್ ಅಷ್ಟೇ.. ಬೇಡ ಉಗ್ಗಪ್ಪ ಬುಡಿ ಮೊದುವೆನ ಬಗ್ಗೆ ಹೇಳಿ. ಮದುವೆನ ಬಗ್ಗೆ ಎಂಥಂತ ಹೇಳ್ದು ಮಾರಾಯ. ಅದ್ ಮದುವೆನಾ ಅಲ್ಲಾ ನಾಟಕನೋ ನಂಗೊಂದ್ ಗೊತ್ತಾದ್ಲೆ. ನಮ್ಮ ಕಾಲದೊವೆಲ್ಲ ಮನೇಲಿ ಕುದ್ರುದೇ ಒಳ್ಳದ್. ನಾವ್ಗೆ ಆ ಕಾಲದೊವ್ಕೆ ನಮ್ಮ ಕಣ್ಣ್‌ಂದ ಇದರೆಲ್ಲ ನೋಡಿ ಸಹಿಸಿಕಾಂಕೆ

ಅದುಲೆ, ಬಾಯಿಲಿ ಏನೆಲ್ಲ ಹೇಳಿ ಹೋದೆ. ಇನ್ನ್ ನಿಮ್ಮ ಕಾಲಲಿ ಏನ್ ಆಕೆ ಉಟ್ಟ್ರಾ ದೇವ್ರಿಗೆ.. ಗೊತ್ತು! ಎಂತ ಉಗ್ಗಪ್ಪ ಹೇಳಿ ಬೇಗ... ನಿಮ್ಮೊಟ್ಟಿಗೆ ಎಂತಾರ್ ಕೇಳಿರೆ ಒಂದು ಗಂಟೆ ರಾಮಾಯಣ, ದೊಡ್ಡ ಪಿಳ್ಳಿ ಅಸಾಮಾದಾನದಿಂದ 'ಹೌದು ಮಾರಾಯ ನೀವುಗೆ ಅರ್ಜೆಂಟ್. ಒಂದು ಗಾದೆ ಉಟ್ಟು ಹಂಗೆ.. "ಇಂದ್ ಮೊದುವೆ ಆಗಿ ನಾಳೆ ಕೂಸು ಹುಟ್ಟೋಕು" ತೇಳ್ದಾಂಗೆ ನಂಗೆ ಹಾಂಗೆಲ್ಲ ಅರ್ಜೆಂಟ್ ಮಾಡಿಕೆ ಗೊತ್ಲೆ. ಆದರೆ ಹೇಳ್ನೆ ಕೇಳಿ ಮಕ್ಕಳೇ.

ನಾ ಇಲ್ಲಿಂದ ಮರ್ಕಂಜ ಬಸ್ಸಿಗೆ ಹೋದೇನಾ... ಮೆಲ್ಲಂಗೆ ಬಸ್ ಸ್ಟ್ಯಾಂಡ್‌ಲಿ ಇಳ್ದಾಕನ ನನ್ನೊಟ್ಟಿಗೆ ಮೊದುವೆಗೆ ಹೋಗಂವ ಅತ್ತ ಕಾಯರದಂವ ಒಬ್ಬ ಸಿಕ್ಕಿತ್. ಪೋಯಿ ಉಗ್ಗಪ್ಪ ನಾನೂ ಮದುವೆಗೆಂತ ಹೇಳಿ ಒಟ್ಟಿಗೆ ಹಾಲ್‌ಗೆ ಬಂದೋ. ಅಣ್ಣಾ... ಹಾಲ್‌ಗೆ ಹೋದರೆ ಜನ ಯಾರೋ ದೊಡ್ಡ ನೆರ್ದಾಂಗೆ ಕಾಂಬೊದ್ಲೆ. ಛೇ!! ನಾವು ಬಾರೀ ಬೇಗ ಬಂದೊಂತ ಅವನೊಟ್ಟಿಗೆ ಹೇಳಿಕಾಂಡೆ. ಯಾಕೆಂತೇಳ್ರೆ ನಾವ್ಗೆ ಲೆಕ್ಕ ಮಾಡ್ದಾಂಗೆ ಒಂದೆರ್ಡು ಬಸ್ಸು ಒಳಾದಲಾ?

ಉಗ್ಗಪ್ಪ ಮತ್ತೆ ನಿಮ್ಮ ರೈಲ್ ಬೇರೆ ಎಲ್ಲಿಗೋ ಹೋಗ್ತಾ ಉಟ್ಟು ದೊಡ್ಡ ಪಿಳ್ಳಿ ಹೇಳ್ತ್. ಅಯ್ಯೋ ಮಾರಾಯ ಹೇಳಿನೆ.. ಹಾಲ್‌ಗೆ ಎತ್ತಿದೇ ತಡ, ಎರಡು ಮೂರು ಜನ ಬೆಡಿನಾಂಗೆ ಹೆಗ್‌ಲ್ ಮೇಲೆ ಇಸಿಕಂಡ್ ಓಡಿ ಬಂದೊ. ನಂಗೆ ಒಮ್ಮೆ ತಬ್ಬಿಬ್ಬಾತ್. ಕರೆಗೆ ಹೋಗಿ.. ಕರೆಗೆ ಹೋಗಿ.. ಮೊದು ಮಕ್ಕ ಬಂದೊಂತ ಯಾರೋ ಒಬ್ಬ ಅವಂರ್ದ ಮುಂದೆ ಓಡಿ ಬಾತ್. ನಾ ಹೇಂಗಾರ್ ದೊಣ್ಣೆ ಕುತ್ತಿಕಂಡ್ ಕರೆಗೆ ತೆಲ್ಗಿದೆ. ಮಕ್ಕ ನೆಗಾಡಿಕಂಡ್ ಅದ್ ಬೆಡಿ ಅಲ್ಲಾ ಉಗ್ಗಪ್ಪ ವಿಡಿಯೋ ಕ್ಯಾಮಾರಾ ಸಣ್ಣ ಪಿಳ್ಳಿ ಹೇಳ್ತ್. ಎಂತ ವೀಡಿಯೋನೋ ಏನೋ. ಏನ್ ಅವರ ಜೀವ ಹೋದೆನಾ ಮೆಲ್ಲಂಗೆ ಬಂದರೆ??

ಹಾಂಗೆ ಕಾರ್ ನಿತ್ತಾಕನ ಒಬ್ಬ ಬೆಡಿನಂವ ಇಳಿ ಬೊಡಿ, ಇಳಿಬೊಡಿಂತ ಮೊದೊಳಿಗೆನ ತಡ್ತ್. ಬಹುಶಃ ರಾಹುಕಾಲ, ಗುಳಿಗ ಕಾಲೋನೋ ಇರೋಕುಂತ ಸುಮ್ಮನಾದೆ. ನೋಡಿರೆ ಹಾಂಗಲ್ಲ ಇಳೇದು ಹೆಂಗೆಂತ ಆ ಬೆಡಿನಂವ ಹೇಳ್ತ್. ಅಂವ ಹೇಳ್ದಾಂಗೆ ಇದು ಮೆಲ್ಲ ಕಾರ್‌ನ ಬಾಗಿಲ್ ತೆಗ್ದ್ ಕಾಲ್ ಹೊರೆಗೆ ಇಸಿಕಾಕನ ಒಬ್ಬ ಬೆಡಿನಂವ ಬಡ್ಕಂತ ಅದರ ಕಾಲ್ ಬುಡಕ್ಕೆ ಬೀತ್.

ಏ...ಸೀ...ಇಂವಂಗೆ ಇದ್ದಾಕಿದ್ದಾಂಗೆ ಏನಾತ್ಂತ ಹೆದ್ರಿ ಹೋದೆ. ಸುಟ್ಟೋವು ಈ ದುಡ್ಡುಗಾಗಿ ಎರ್ಡ್ ಮೂರು ದಿನ ನಿದ್ದೆ ಕೆಡ್ತು, ಉಂಬಂಕೆ ತಿಂಬಕೆ ಸರಿ ಇಲ್ಲೆಂತ ಮನ್ಸಲೆ ನೆನ್ಸಿಕಂಡೆ. ನೋಡಿರೆ ಮಸಿಗಿದೆ!! ಅಂವ ಬಿದ್ದಲಿಂದಲೇ ಏನೋ ಮಾಡಿಕೆ ಶುರು ಮಾಡ್ತ್. ಮಕ್ಕಾ ಇಬ್ಬರೂ ಬಾಯಿಗೆ ಕೈ ಹಿಡ್ದ್ ಜೋರು ನಗಾಡ್ತೊ. ಅದ್ ಬಿದ್ದದಲ್ಲ ಉಗ್ಗಪ್ಪ ಕಾರ್‌ಂದ ಇಳೆಕಾಕನ ಗೂಡೆನ ಕಾಲ್‌ಂದನೆ ಫೋಟೋ ತೆಗಕೆ ಕುದ್ದದ್. ಓ ದೇವ್ರೆ ಅವ ನಿತ್ತ್‌ಕಂಡ್ ತೆಗ್ದರೆ ಸತ್ತು ಹೋದೇನಾ?...ಅದ್ ಆತಲ್ಲಾ. ಮತ್ತೆ ಹೇಂಗೂ ಗೂಡೆ ಕಾರ್‌ಂದ ಇಳ್ದ್ ನಡೆಕೆ ಶುರು ಮಾಡ್ತ್.. ನಡೆಕಾಕನ ರಾಮ..ರಾಮ!!..ಅದರ ಹೇಳಿ ಸುಖ ಇಲ್ಲೇ. ಈ ಮೂರು ಜನ ಬೆಡಿನಾಂಗಿದ್ದದರ

ಹಿಡ್ಕಂಡ್ ನಾಯಿಗ ಮೂಸಿದಾಂಗೆ ಮಾಡಿಕಂಡ್ ಮೊದೊಳಿಗೆ ರೂಂಗೆ ಎತ್ತ್‌ಕಾಕನ ಹೆಚ್ಚ್ ಕಮ್ಮಿ ಅರ್ಧಗಂಟೆ!!.. ನಂಗೆ ಬಂದಲ್ಲಿಗೆ ಒಮ್ಮೆ ಹೋದರೆ ಸಾಕ್‌ಂತ ಆಗ್ತಾ ಇತ್ತ್.

ಹಾಂಗೆ ಅವರೊಟ್ಟಿಗೆ ನಾನೂ ಮೆಲ್ಲ ಹೆಜ್ಜೆ ಹಾಕಂಡ್ ಹೇಂಗಾರ್ ಹಾಲ್‌ನ ಒಳಗೆ ಬಂದೊ. ಬಂದವನೆ ಎದ್‌ರ್ ಕುರ್ಚಿಲಿ ಗೋಡೆ ಕರೇಲಿ ಕುದ್ದೆ. ನನ್ನ ದೊಣ್ಣೆನ ಹಾಂಗೆ ಗೋಡೆಗೆ ಒರ್ಗಿಸಿ ಇಸಿದೆ. ಅಷ್ಟೋತ್ತಿಗೆ ಯಾರೋ ಒಬ್ಬ ಬಂದ್, ಉಗ್ಗಪ್ಪ ನಮಸ್ಕಾರಂತ ಹೇಳ್ತ್. ಅದ್ ಯಾರ್‌ಂತ ನಂಗೆ ಸರಿ ಕಂಡತ್ಲೆ. ಕಣ್ಣ್ ಮಯ ಮಯ ಅಗಿ ಯಾರ ಗುರ್ತನೂ ಸಿಕ್ಕುದುಲೆ. ಆದರೂ ಮೊದುವೆ ಮನೆನವನೇ ಅಗಿರೋಕುಂತ ನೆನ್ಸಿ ನಮಸ್ಕಾರಂತ ಹೇಳ್ದೆ. ನೀವ್ಗೆ ಕುಡೆಕೆ ಸಿಕ್ಕಿತಾಂತ ಕೇಳ್ದೊ. ಕುಡೆಕೆ ಅವನ ಅಪ್ಪ ಯಾರು ನಂಗೆ ಕೊಟ್ಟತ್ಲೆ. ಹಾಂಗೆ ಹಾಲ್‌ಲಿ ಕುಡೆಕೆ ಮನೆನಾಂಗೆ ತಂದ್ ಕೊಡ್ದುಲೆ ಉಗ್ಗಪ್ಪ. ಅಲ್ಲಿ ಹೊರಗೆ ಹೊಯ್ದ್ ಇಸಿಕಂಡ್ ಇದ್ದದೆ. ನಾವೇ ಕುಡೇಕುಂತ ದೊಡ್ಡ ಪಿಳ್ಳಿ ಹೇಳ್ತ್. ಅಲ್ಲಿ ಹೊಯ್ದು ಇಸುದು ಯಾರಿಗೆ ಗೊತ್ತು?? ನಮ್ಮಂತೋವುಕೆ ಕಾಣಕಲ್ಲಾ?.

ಹಾಂಗೆ ಕುದ್ದ್‌ಕಂಡ್ ಇದ್ದಾಂಗೆ ಅರ್ಧ ಗಂಟೆಲಿ ಧಾರೆಗೆ ರೆಡಿ ಅತ್ ಕಂಡದೆ. ಎಲ್ಲವೂ ಆಚೆ ರೂಮುಂದ ಈಚೆ ರೂಮುಂದ ಹೊರ್ಟ್‌ಕಂಡ ಬಂದೊ. ಅವರೊಟ್ಟಿಗೆ ಬೆಡಿನೊವು ಕೂಡಾ ಕರೆ ಕರೆ ಒಂದಿದೊ. ನಾ ಎದ್‌ರ್‌ಂದ ಕುದ್ದ್‌ಕಂಡ್ ಇದ್ದಂವ ಒಮ್ಮೆ ಇಣ್ಕಿ ನೋಡ್ದೆ. ನೋಡಿರೆ ಗೂಡೆಗೆ ಸರಿ ಸೀರೆನೂ ಉಡ್ಸಿತ್ಲೆ. ಬರೀ ಒಳಗೆ ಹಾಕುವ ಉದ್ದ ಲಂಗನೂ ಮೇಲೆ ಹೊದ್ದುಕಾಂಕೆ ಒಂದು ಶಾಲ್ ಮಾತ್ರ ಇತ್ತ್. ಈಚೆಂದ ನೋಡಿರೆ ಹೈದಂಗೆ ಗೂಡೆಗೆ ಹಾಕುವ ಚೂಡಿದಾರಂತ ಹೇಳ್ವೆ ಅಲಾ..ಅದರ ಹಾಕಳೊ. ಹೆಗಲ್ ಮೇಲೆ ಒಂದು ಉದ್ದದ ಶಾಲ್. ಅದರೂ ನೋಡಿಕೆ ಲಾಯಿಕ್ ಕಾಂಬೊತ್ತಿತ್ತ್. ಏನ್ ಅನ್ಯಾಯ ಗೂಡೆಗೆ ಒಂದೂ ಸೀರೆನಾದ್ರೂ ಉಡ್ಸಿಕೆ ಬೊತ್ತಾ ಕುಲ ಗೆಟ್ಟವ್ಕೆ?!

ಮಕ್ಕ ಹಿಂದಕೆ ಅಡ್ಡ ಅಡ್ಡ ಬಿದ್ದ್ ನೆಗಾಡ್ದೊ. ಉಗ್ಗಪ್ಪಂಗೆ ಸಿಟ್ಟು ಬಾತ್. ಹುಚ್ಚರಾಂಗೆ ನೆಗಾಡ್ರೆ ನಿಮ್ಮ ತಲೇಗೆ ಕುಟ್ಟಿನೆ ಕುರೆಗಂತ ಬೈದೊ. ಮಕ್ಕ ತಡೆಕೆ ಆಗದೆ ಬಾಯಿನೂ ಮೂಂಕುನ್ ಒಟ್ಟಿಗೆ ಮುಚ್ಚಿಕಂಡ್ ಕುದ್ದೊ. ದೊಡ್ಡ ಪಿಳ್ಳಿ ಮೆಲ್ಲಂಗೆ ಹೆದ್ರಿಕಂಡ್ ಹೇಳ್ತ್. ಈಗನ ಡ್ರೆಸ್ ಪಿಚ್ಚರ್ ಸ್ಟೈಲ್ ಉಗ್ಗಪ್ಪಾ. ಈಗೆಲ್ಲ ಹಾಂಗೆನೆ ಮೊದುವೆ ಆದು. ಎಂತ ಪಿಚ್ಚರ್ ಸ್ಟೈಲ್ ಮರಾಯ.. ಸರಿ ಬಟ್ಟೆ ಹಾಕಿಕೆ ಬೊತ್ತಾ?. ಹಾಂಗೆ ಅಗಿಯೇ ಈಗ ಹೋದಲ್ಲಿ ಬಂದಲ್ಲಿ ಕೊಲೆ, ಅತ್ಯಚಾರಂತ ಆದು. ಹೆಣ್ಣು ಮಕ್ಕ ಮೈ, ಎಲ್ಲಿ ತೋರ್ಸೋಕೋ ಅಲ್ಲಿನೇ ತೋರ್ಸೋಕು. ಇದ್ ಎಂತ ಹೇಸಿಕೆ ಅಣ್ಣಾ...ನಾ ನಿನ್ನಾ ಉಗ್ಗವನ ನೋಡಿಕೆ ಹೋಕನ ಅದ್ ಒಂದು ಉದ್ದ ಲಂಗ ಹಾಕಿ, ಪುಲ್ ಕೈ ರೊವ್ಕೆ ಹಾಕಿ, ಯಾರೋ ಒಳಗೆಂದ ನೂಕಿ ಹಾಕಿದ್ ಕಂಡಂದೆ. ಒಂದೇ ಹಾರಾಟಕ್ಕೆ ಜಗ್ಲಿಂದ ಕಪ್ಪ ಹಾರಿ ಓಡಿಟು. ನಾ ನಿನ್ನಾ ಉಗ್ಗವನ ಸರಿಯಾಗಿ ನೋಡ್ದ್ ಮದುವೆ ಆಗಿ ಒಂದ್ ತಿಂಗ ಕಳ್ದ್. ಗೊತ್ತುಟ ನೀವ್ಗೆ?.

ಆಗ ನೀವ್ಗೆ ಜ್ಯೂಸ್ ಸ್ವೀಟ್ಸ್ ತಂದ್ ಕೊಟ್ಟತ್ಲೇನಾ? ಸಣ್ಣ ಪಿಳ್ಳಿ ಕೇಳ್ತ್. ಆಗ ಜ್ಯೂಸ್ ಗೀಸ್ ಎಲ್ಲಾ ಇತ್ಲೆ ಮರಾಯ. ಗೂಡೆ ನೋಡಿಕೆ ಹೋಕಾಕನ ಕಣ್ಣ ಚಾಯನ ಕೀಜಿನ ಗ್ಲಾಸ್‌ಲಿ ಕೊಟ್ಟೊ, ಎರ್ಡ್ ಎರ್ಡ್ ಹಲ್ಸ್‌ನ ಹಪ್ಪಳ, ಕಾಯಿ ಹೋಳ್ ತಿಂಬಕೆ. ಮಕ್ಕ ಇಬ್ಬರೂ ಏನೋ ಆಲೋಚನೆ ಮಾಡ್ದಾಂಗೆ ಕಂಡತ್. ಕೂಡ್ಲೇ ಅಜ್ಜಂಗೆ ಅರ್ಥ ಆತ್.

ಹಾಂ ಹೇಳ್ನೆ ಮಾರಾಯ.. ಹಾಂಗೆ ಮೊದುಮಕ್ಕ ಬಂದೊ.. ಅವರೊಟ್ಟಿಗೆ ನೀವು ಹೇಳ್ದಾಂಗೆ ಪಿಚ್ಚರ್‌ಲಿ ಬಂದಾಂಗೆ ಒಬ್ಬ ಭಟ್ರ್ ವೇಷ ಹಾಕಂಡ್ ಬಂದೋ. ಕೈಲಿ ಹರಿವಾಣ ಅದರ ಮೇಲೆ ಕಳ್ಸಿಗೆ, ಚಮ್ಚ ಇದ್ದದರ್‌ಂದ ಭಟ್ರೆ ಆಗಿರೋಕಾಂತ ತಿಳ್ಕಂಡೆ. ಹಂಞ ಹೊತ್ತಿಗೆ ಕೆಳಗೆ ಕುರ್ಸಿಲಿ ಕುದ್ದ ನಂಗೆ.. ಈ ಬೆಡಿನೋವು ಅವರೊಟ್ಟಿಗೆ ದೊಡ್ಡ ದೊಡ್ಡ ಹೆಣ್ಮಕಳ ಕುಂಡೆಗ ಮಾತ್ರ ಕಾಂಬಕೆ ಶುರು ಆತ್. ಅವರ ನಡುಂದ ಭಟ್ರ ಮಂತ್ರ ಕೇಳ್ತಾ ಇತ್ತ್. ಅಲ್ಲಿ ಮೊದುವೆ ಆಗ್ತಾ ಉಟ್ಟಾ ಅಲ್ಲಾ ಸತ್ಯನಾರಾಯಣ ಪೂಜೆನೋ ಎಂತುದುಂತ ನಂಗೆ ಕಾಂಬೊತಿತ್ಲೆ. ಆಗಾಗ ಬೆಡಿನಂವ ಲೈಟ್ ಹಾಕಿ ನಮ್ಮ ಕಡೆ ತಿರ್ಗ್‌ಸ್ತಾ ಇತ್ತ್. ಆಗೆಲ್ಲಾ ನನ್ನ ಎದೆ ಧಸ್‌ಕಂತ ಹೇಳ್ತಿತ್ತ್. ಯಾಕೆ ಉಗ್ಗಪ್ಪ...ದೊಡ್ಡಾ ಪಿಳ್ಳಿ ಕೇಳ್ತ್. ಎಲ್ಯಾರ್ ಲೈಟ್ ಹಾಕಿ ಮೃಗಂಗೆ ಹೊಡ್ದಾಂಗೆ ಹೊಡೇಕೆ ಬೊತ್ತಾಲ್ಲ..? ಹಂಞ ಹೊತ್ತ್ ಕಳ್ದಾಂಗೆ ಹಿಂದಕೆ ಎಲ್ಲವು ಒಳಗೆ ಹೋದೊ. ಆಗ ಹಕ್ಕಲೆ ಕುದ್ದಾಂವನೊಟ್ಟಿಗೆ ನಾ ಕೇಳ್ದೆ ಮದುವೆ ಆತಣ್ಣಾಂತ. ಹಾಂ..ಧಾರೆ ಆತ್ ಉಗ್ಗಪ್ಪ ಇನ್ನ್ ಅರ್ಧ ಗಂಟೆಲಿ ಪಚಾರಕ್ಕೆ ಕುದ್ರಿಸುವೆಂತ ಹೇಳ್ತ್. ಮೆಲ್ಲ ಅವನೊಟ್ಟಿಗೆ ಕೇಳ್ದೆ. ಅಣ್ಣಾ ಮೊದುವೆಗೆ ಕವರ್ ಮಿನಿ ಕೊಡಿಕೆ ಉಟ್ಟಂತ? ಇಲ್ಲೆ ಇಲ್ಲೆ ಉಗ್ಗಪ್ಪ...ಪಚಾರಕ್ಕೆ ಕುದ್ರಿಸಿದ ಕೂಡ್ಲೆ ಅಕ್ಕಿ ಹಾಕುದು ಊಟ ಮಾಡ್ದುಂತ ಹೇಳ್ತ್. ಹೆಂಗೂ ಬಂದಾತಲ್ಲ ಇನ್ನ್ ಒಂದ್ ಅರ್ಧ ಗಂಟೆ ಉಂಡು ಹೋದರತಾತ್‌ಂತ ನೆನ್ಸಿಕಂಡೆ. ಅರ್ಧ ಗಂಟೆ ಅಲ್ಲ ಹೆಚ್ಚಿ ಕಮ್ಮಿ ಒಂದು ಗಂಟೇನೆ ಆತ್. ಮೊದ್‌ಮೊಕ್ಕ ಸ್ಟೇಜ್‌ಗೆ ಬಂದೊ. ನಂಗೆ ಒಂದು ಕಡೆಂದ ಹೊಟ್ಟೆನೂ ಇಸಿಕೆ ಶುರು ಆತ್. ಆಗ ಹಿಂದಕ್ಕೆ ಹಕ್ಕಲಿದ್ದವನೊಟ್ಟಿಗೆ ಕೇಳ್ದೆ. ಗಂಟೆ ಎಷ್ಟ್ ಆತ್ ಅಣ್ಣಾಂತ?? ಗಂಟೆ ಒಂದ್ ಕಳ್ತ್‌ಂತ ಅಂವ ಹೇಳ್ತ್. ಓ ದೇವ್ರೇ ಇನ್ನ್ ಮಧ್ಯಾಹ್ನದ ಬಸ್ಸ್ ಸಿಕ್ಕಿಕಿಲೆ. ಇನ್ನ್ ಹಿಂಬೊತ್‌ನ ಬಸ್ಸೇ ಗತಿಂತ ಲೆಕ್ಕ ಹಾಕಿದೆ. ಮೊದುಮೊಕ್ಕ ಸ್ಟೇಜಿಗೆ ಬಾಕನ ಈ ಹೊತ್ತಾದರ್‌ಂದ ಎಲ್ಲ ಜನಗ ದನಂಗ ಓಡುವಂಗೆ ಓಡ್ದೊ. ಓಡಿಕಾಕನ ಎರ್ಡ್ ಜನ ಹೊಂತಗಾರಿ ಹುಡ್ಗರ್ ಸ್ಟೇಜ್‌ಲಿ ಕೈ ಅಡ್ಡ ಕಟ್ಟಿ ನಿಲ್ಸಿದೊ. ಇವರ ಉರ್ದ ಪತ್ತ ನೋಡಿ ನಂಗಾ ಆತ್. ಹೇಂಗೂ ಕವರ್ ಹಾಕಿಕೆ ಇಲ್ಲೆ ಇವರ ನಡುಲಿ ಈ ದೊಣ್ಣೆ ಹಿಡ್ಕಂಡ್ ನಂಗೆ ಉರ್ದಿಕೆ ಆಕಿಲೆ. ಅದ್ ಕೂಡಾ ನನ್ನ ಕಾಲ್‌ಲಿ ಜೋಡು ಸಹ ಇಲ್ಲೆ. ಎಲ್ಲವೂ ಕಾಲ್‌ಲಿ ಜೋಡು, ಬೂಡ್ಸು ಹಾಕಂಡ್ ಆ ಭಾಗ್ಯಲಕ್ಷ್ಮಿ ಅಕ್ಕಿಗೆ ಮೆಟ್ಟಿಕಂಡೆ ಹೋದವೆ. ಇದರೆಲ್ಲ ನೋಡಿಕಕಾನ ನಂಗೆ ಯಾಕೋ ಮೇಲೆ ಹೋದೇ ಬೇಡಾಂತ ಮನ್ಸಲಿ ಆಗಿ ಮೆಲ್ಲಂಗೆ ಕುದ್ದಲಿಂದ ಎದ್ದೆ.

ಎಲ್ಲಿಗೆ ಉಗ್ಗಪ್ಪ ಮನೆಗೆ ಹೊರ್ಟ್‌ದಾ? ಸಣ್ಣ ಪಿಳ್ಳಿ ಕೇಳ್ತ್? ಹಾಂ, ಹೊರ್ಟದ್

ನಿನ್ನ ಅಪ್ಪನ ಮನೆಗೆ...ಬಂದಲ್ಲಿಗೆ ಒಂದು ಬಾಯಿ ಉಂಡ್‌ಕಮೋಂತ ಎದ್ದದ್. ಆಚೆ ಪುಡೇಲಿ ಎಲ್ಲವು ಉಂಬಕೆ ಹೋಗ್ತಾ ಇದ್ದೊ. ನಾ ಅವರೊಟ್ಟಿಗೆ ದೊಣ್ಣೆಹಿಡ್ಕಂಡ್ ಹೋದೆ. ಕುದ್ರಿಕೆ ಎಲ್ಯಾರ್ ಉಟ್ಟಾಂತ ನೋಡ್ದೆ .ಊಹ್ಞು ಕುದ್ರಿಕೆ ಇಲ್ಲೆ. ಬಟ್ಲ್ ಹಿಡ್ಕಂಡ್ ಎಲ್ಲರೊಟ್ಟಿಗೆ ನಿಲ್ಲೋಕಾತ್. ಜನಂಗ ಸುಮ್ಮನೆ ನಿತ್ತರೆ ಅದಲ್ಲಾ? ಈ ನೂಕು ನುಗ್ಗಲ್‌ಂದಾಗಿ ಒಳ್ಳ ದೋಣಿ ತೆಗ್ದಾಂಗೆ ಹಿಂದೆ ಮುಂದೆ ಹೋಗ್ತಿದ್ದೊ.. ಹೇಂಗೋ ಬಳ್ಸವನಕ್ಕಲೇ ಹೋದೆ. ಹೋದಾಂಗೆ ಒಬ್ಬ ಉಪ್ಪನಕಾಯಿ ಇಕ್ಕಿತ್. ಇನ್ನೊಬ್ಬ ನೆಟ್ಟಿಕಾಯಿನೆಲ್ಲಾ ಕೊಯ್ದು ಗಂಜಿನೊಟ್ಟಿಗೆ ಬೇಸಿದರ ನನ್ನ ಬಟ್ಲಗೆ ಹಾಕಿತ್. ಅವುಕೆ ಗಂಜಿ ಗೈಪು ಬೇರೆ ಬೇರೆ ಮಾಡಿಕೆ ಏನಾ ಸಂಕಟನಾ? ಮಕ್ಕ ಮೋರೆ ಮೋರೆ ನೋಡಿಕಂಡೊ. ಅದ್ ಪಲಾವು ಉಗ್ಗಪ್ಪ..ಸಣ್ಣ ಪಿಳ್ಳಿ ಹೇಳ್ತ್. ಎಂತ ಮುಲಾಮು ಅದರೂ ಬೇರೆ ಬೇರೆ ಬೇಸಕಲ್ಲಾ..? ಅದರ ಮೇಲೆ ಕಾಯಿ ಮೆಣ್ಸ್, ಟೊಮೆಟೊ, ನೀರುಳ್ಳಿ ಕ್ಯೊದು ಮೊಸರ್‌ಗೆ ಹಾಕಿದರ ಹಂಞ ಹಂಞ ಮತ್ತೊಬ್ಬ ಇಕ್ಕಿತ್. ಇದಾದ ಮೇಲೆ ಆಚೇಲಿ ಹುಗ್ಗೆ  ಇಸಿಕಂಡದ್ ಕಂಡತ್, ಅಲ್ಲಿಗೆ ಹೋಕನ ಒಬ್ಬ ಉಗ್ಗಪ್ಪ.. ಇದರ ತಿಂದ್ ಬನ್ನಿ. ಆಮೇಲೆ ಇದರ ಇಕ್ಕುದುಂತ ಹೇಳ್ತ್. ಹಾಂಗೆ ಮೆಲ್ಲ ಎಲ್ಲವು ಉಂಬೊದರ ಎಡೆಗೆ ಹುಕ್ಕ್ ದೊಣ್ಣೆನ ಕೈಗೆ ಒರ್ಗಿಸಿಕಂಡ್ ಈ ಮುಲಾಮುನಾ ಹಸಿನೆಟ್ಟಿಕಾಯಿಯೊಟ್ಟಿಗೆ ಕಲ್ಸಿ ಇನ್ನೇನ್ ಬಾಯಿಗೆ ಹಾಕೋಕುಂತ ಕೈ ಎತ್ತಿಕಾಕನ ಯಾರೋ ಒಬ್ಬ ತಲೆ ಹೋಕಾ ಹೈದನ ತಲೆ ನನ್ನ ಮೊಣ್ಕೈಗೆ ಕುಟ್ಟಿತ್.. ನನ್ನ ಕೈ ನನ್ನ ಬಾಯಿಗೆ ಹೋಗುವ ಬದ್ಲ್ ಹಕ್ಕಲೆ ನಿತ್ತ ಹೆಂಗಸ್‌ನ ಕೆಪ್ಪೆಗೆ ತಾಂಗಿತ್. ಹೆಂಗ್‌ಸ್‌ಗೆ ಒಮ್ಮೆ ನಾಚಿಕೆ ಆತ್. ಏನೋ ಬೊಯ್ಯಕೆ ಬಾಯಿ ತೆಗ್ದದ್ ನನ್ನ ಬಂಗನ ನೋಡಿ ನೀವು ಇಲ್ಲಿ ಬನ್ನಿ ಉಗ್ಗಪ್ಪಂತ ನನ್ನ ಕರೆಗೆ ಕರ್ಕಂಡ್ ಹೋಗಿ ಕರೇಲಿದ್ದ ಬೆಂಚಿಲಿ ಕುದ್ರಿಸಿತ್. ನೀವುಗೆ ಬೇಕಾದ್ ನಾ ತಂದು ಕೊಟ್ಟನೆ ನೀವು ಇಲ್ಲೇ ಕುದ್ರಿಂತ ಹೇಳ್ತ್ ಆ ಪುಂಡಳ್ ತಾಯಿ. ಅದರ ತಿಂದ ಮೇಲೆ ಹಂಞ ಹುಗ್ಗೆ ಬೇಕುಂತ ಹೇಳ್ದೆ. ಅದ್ ಹುಗ್ಗೆ, ಅದರ ಮೇಲೆ ಹಂಞ ಆಂಬರ ಹೊಯ್ದ್ ತಾತ್. ಅದರೊಟ್ಟಿಗೆ ಎರಡು ಮೂರು ಬಗೆ ಸಿಂಹಿ ಖಾರಂತ ಎಂತದೋ ಗೈಪು ಇತ್ತ್. ಹಾಂಗೆ ಬಂದ್ ಪಾಯಸ ಬೇಕಾಂತ ಕೇಳ್ತ್.  ದಮ್ಮಯಕ್ಕ ನಂಗೆ ಏನ್ ಬೇಡಾಂತ ಹೇಳ್ದೆ. ಓ ಅಲ್ಲಿ ಹೊರಗೆ ಒಂದ್ ಗಾಡಿ ಇಸ್ಯೊಳೊ ಅದ್ಕೆ ಬಟ್ಲ್ ಹಾಕಿ ಕೈ ತೊಳ್ಕಣಿಂತ ಹೇಳ್ತ್. ಹಾಂಗೆ ಮೆಲ್ಲ ಹೊರ್ಟ್ ಬಟ್ಲ್ ಹಾಕಿ ಅಲ್ಲೆ ಇದ್ದ ನಳ್ಳಿಲಿ ಕೈ ತೊಳ್ದ್ ಬಾಕ್ಯಾಕನ ಒಬ್ಬ ಹೈದ ಕರ್ದ್, ಈ ಐಸ್ ಕ್ಯಾಂಡಿ ಕೊಟ್ಟತ್. ಬೇಡ ತೇಳ್ದಾಂಗೆ ತಿನಿ ಉಗ್ಗಪ್ಪಂತ ಕೊಟ್ಟ್, ಈಗ ನೋಡಿ ಮಾತಾಡಿಕೆ ಸಹ ಆದುಲೆ. ಹಾಂಗೆ ತಿಂದ್ ಅದ ಮೇಲೆ ಒಬ್ಬ ವಾಚಿ ಕಟ್ಟಿದವನೊಟ್ಟಿಗೆ ವಾಪಾಸ್ಸ್ ಗಂಟೆ ಎಷ್ಟಾತ್‌ಂತ ಕೇಳ್ದೆ. ಗಂಟೆ ಎರ್ಡುವರೆ ಆತ್‌ಂತ ಹೇಳ್ತ್. ಅಯ್ಯನ ಬಂಡೆ ಇನ್ನ್ ನಾಕ್ ಕಾಲಕ್ಕೆ ಬಸ್ಸ್. ಬಸ್ಸ್ ಸ್ಟ್ಯಾಂಡಿಲಿ ಹೋಗಿ ಎಂತ ಮಾಡ್ದುಂತ ಯೋಚನೆ ಮಾಡಿ ಅಲ್ಲೇ ಹೊರಗೆ ಇಸಿದ ಬೆಂಚಿಲಿ ಕುದ್ರೋಮೊಂತ ಕುದ್ದೆ.

ಅಷ್ಟೊತ್ತಿಗೆ ಈ ಬೆಡಿನಾಂಗಿದ್ದೋವು ಮೂರು ಜನ ಮೊದು ಮಕ್ಕಳ

ನಡುಲಿ ಹಾಕಿ ನಾ ಕುದ್ದ ಹಕ್ಕಲೆ ಕರ್ರ್ಕೊಂಡು ಬಂದೋ!.. ಎಲಾ.. ಭಗವಂತ...ಇವು ಎಲ್ಲಿಗೆ ಮೊದುಮಕ್ಕಳ ಕರ್ಕಂಡ್ ಹೋರ್ಬ್ಬಿದ್. ಮೊದುವೆ ಮನೆವ್ಕೆ ಗೊತ್ತುಟಾ ಇಲ್ಲೆನಾಂತ ನಾ ಯೋಚನೆ ಮಾಡಿಕಾಕನ.. ಗೂಡೆನ ಕರೆಗೆ ನಿಲ್ಲಿಕೆ ಹೇಳಿ ಈ ಬೆಡಿನೋವು ಮೊದುಮಂಞನ ಕರೆಗೆ ಕರ್ಕಂಡ್ ಹೋಗಿ ಕೈ ಕಟ್ಟಿ ನಿಲ್ಲಿಕೆ ಹೇಳ್ದೋ. ಪಾಪ ಅಂವ ಹೆದ್ರಿ ಆಗಿರೋಕು ಅವು ಹೇಳ್ದಾಂಗೆ ಕೇಳಿಕೆ ಶುರು ಮಾಡ್ತ್. ಈ ಬೆಡಿ ಹಿಡ್ಕಂಡಿದ್ದೋವು ಅವನ ಹಿಂದೆಂದ, ಮುಂದೆಂದ, ಕಾಲ್ಂದ, ತಲೆಂದ, ಕಾಲ್ ಅಡ್ಡ ಹಾಕಿ, ಕಾಲ್ ಕುತ್ತ ಮಾಡಿ ಬಂಗ ಬರ್ಸಿಕೆ ಶುರು ಮಾಡ್ದೊ. ಅಂವಂಗೆ ಬೆಗ್‌ರ್ ಇಳೆಕೆ ಶುರು ಅತ್. ಅಂವನ ನೀವು ಹಂಞ ಕುದ್ರಿಂತ ಹೇಳಿ ಗೂಡೆನ ಕರ್ದೋ. ಗೂಡೆನ ಕೂಡಾ ಮೂರುಜನ ಹೇಳ್ದಾಂಗೆ ಕೇಳ್ಸಿಕೆ ಶುರು ಮಾಡ್ದೊ. ಸೊಂಟ ತಿರ್‍ಗಿಸಿ, ಕಣ್ಣ್ ಓರೆ ಮಾಡಿ, ಕೈ ಬೆರ್ಲ್ನ ಕೆಪ್ಪಗೆ ಇಸಿ, ಮೇಲೆ ನೋಡಿ, ಕೆಳಗೆ ನೋಡಿ...ಇನ್ನ್ ಏನೇನ್‌ಂತ ನಂಗೆ ಗೊತ್ತಾದ್ಲೆ. ಒಟ್ಟು ಅದ್ಕೆ ಸಾಕ್ ಬೇಕಾದಾಂಗೆ ಅತ್. ಒಬ್ಬ ಬೆಡಿನಂವ ಅಡ್ಡ ಬಿದ್ದ್ ತೆಗ್ದರೆ, ಮತ್ತೊಬ್ಬ ಕುದ್ದಕಂಡ್, ಇನ್ನೊಬ್ಬ ನಿತ್ತ್‌ಕಂಡ್ ಛೀ.. ಅದರ ನೋಡಿಕೆ ಬೊತ್ತ್. ಇದಾದ ಮೇಲೆ ಇಬ್ಬರ ಒಟ್ಟಿಗೆ ನಿಲ್ಸಿ ಅದೆಂಥದೊ ಮಾಡಿಕೆ ಶುರು ಮಾಡ್ದೊ. ಹೈದ ಓಡಿ ಬಾದು.. ಗೂಡೆ ಅವನ ಸೊಂಟ ಹಿಡ್ಕಂಬೊದು, ಇಬ್ಬೋರು ಹೆಗ್‌ಲ್ ಮೇಲೆ ಕೈ ಹಾಕುದು, ಕುಂಡೆ ಕುಂಡೆ ನಿತ್ತ್ ತಿರ್‍ಗಿ ನೋಡ್ದು, ಹೈದ ಕುದ್ದ್ ಗೂಡೆನ ಕೈ ಹಿಡಿದು, ಗೂಡೆ ಕುದ್ದ್ ಹೈದನ ಮೇಲೆ ನೋಡ್ದು, ತಬ್ಬಿಕಂಬೋದು...ಅದರ ಹೇಳಿ ಸುಖ ಇಲ್ಲೇ.. ನಂಗೆ 76 ವರ್ಷ ಅದರೂ ಇದರೆಲ್ಲ ನೋಡಿಕೆ ಆತ್ಲೆ. ಎದ್ದ್ ಹೋಗೊಮೊಂತ ಹೇಳ್ರೆ ಎಲ್ಲಿಗೆ ಹೋದು?? ನಮ್ಮ ಕಾಲಲಿ ಇಂತದೆಲ್ಲ ನೋಡ್ತ್‌ಲೆ, ಕೇಳ್ತ್‌ಲೆ.. ನನ್ನ ಇಡೀ ಜೀವ ಮಾನಲಿ ಇವು ನನ್ನ ಎದ್‌ರ್ ನಡ್ಕಂಡಂಗೆ ನಾನು ಉಗ್ಗವನು ಇಷ್ಟ್ ವರ್ಷ ನಡ್ಕಂತಿಲ್ಲೆ. ಕಾಲ ಕೆಟ್ಟ್ ಹೋತ್‌ಂತ ಅತ್ ಅದರೊಟ್ಟಿಗೆ ಒಬ್ಬ ಬೆಡಿನಂವ ಮೊದೊಳಿಗೆನ ಕಾಲಕ್ಕಲೆ ಸೀರನ ಸರಿ ಮಾಡ್ದು, ಅದರ ಕೈನ ಗಂಡನ ಎದೆಗೆ ಹೀಂಗೆ ಇಸೋಕುಂತ ತೋರ್ಸುದ್ ಹೀಂಗೆಲ್ಲಾ... ನೀವ್ಗೆ ಅನ್ಸುದು ಮಕ್ಕಳೇ.. ಈ ಉಗ್ಗಪ್ಪಂಗೆ ಹುಚ್ಚು ಕಂಡದೇಂತ. ಈಗನ ಕಾಲನೆ ಹಾಂಗೆಂತ ಆದರೆ ಒಂದು ಮಾತ್ರ ನೆನ್ಪಿಸಿಕಣಿ. ನಮ್ಮ ಕಾಲಲಿ ಒಂದು ಸಂಸ್ಕಾರ ಮತ್ತೆ ಸಂಪ್ರದಾಯಗಳ ದಾಟಿ ಮುಂದೆ ಹೋತಿತ್ತೆ. ಈಗ ನೋಡಿ ಹೀಂಗೆಲ್ಲಾ ಅಡಿಕಂಡಿರ್‍ದಂದ್ಲೆ ಶಾಲೆಗೆ ಹೋಕಾಕನೇ ಮಕ್ಕ ಬೇಡಾದ್ ಮಾಡಿಕೆ ಶುರು ಮಾಡ್ವೆ. ಅಲ್ಲಲ್ಲಿ ಅತ್ಯಾಚಾರ ಕೊಲೆಗ ಆಗ್ತಾನೆ ಒಳೊ. ಮುಂದೆ ಮುಂದೆ ದೊಡ್ಡ ದೊಡ್ಡ ಪೇಟೆಗಳ್ಲಿ ಅಗ್ತಾ ಇತ್. ಈಗ ಹಳ್ಳಿಲಿ ಶುರು ಆವ್ವು, ಮುಂದೆ ಏನಾದೆನೋ..? ಇನ್ ಎಂತರೆಲ್ಲಾ ನಮ್ಮ ಕಣ್ಣ್‌ಂದ ನೋಡಿಕೆ ಉಟ್ಟೋ ದೇವ್ರುಗೆ ಗೊತ್ತು..ಒಮ್ಮೆ ಅತ್ತ ಬೇಗ ಕಣ್ಣ್ ಮುಚ್ಚಿರೆ ಸಾಕಿತ್.

ಈಗಲೇ ಕಣ್ಣ್ ಮುಚ್ಚಿ ಹಾಂಗೆ ಒರ್‍ಗಿ ಮಲ್ಗಿ ಉಗ್ಗಪ್ಪ.. ಕೆಮ್ಮುಲು ಕಮ್ಮಿ ಅದು.. ಪಿಳ್ಳಿಕ ಹೇಳಿಕಂಡ್ ಹೋದೊ, ಅವ್ಕೆ ಅಜ್ಜ ಎಂತ ಹೇಳ್ದ್‌ಂತ ಅರ್ಥನೇ ಆತ್ಲೆ.

ಅಜ್ಜ ಹಾಂಗೆ ಮೊಣ್ಣ್ ಚಿಂಟೆಲಿ ಮಣೆ ಒರ್‍ಗಿಸಿ ಕಣ್ಣ್ ಮುಚ್ಚಿದೊ..

# ಗಾದೆ ಪುರಾಣಗ

- ಅಂಜೇರಿರ ವಿಶು ರಾಘವಯ್ಯ

ಗಾದೆ ಯಾರಿಗೆ ತಾನೆ ಗೊತ್ಲೆ ಹೇಳಿ. ವೇದ ಸುಳ್ಳಾದರು ಗಾದೆ ಸುಳ್ಳಾದುಲೆ ಅಲಾ, "ಹಾಸಿಗೆ ಇದ್ದಷ್ಟ್ ಕಾಲ್ ಚಾಚಕು", "ಅತೀ ಆಸೆ ಗತಿ ಕೇಡು" ಇಂತಹ ಗಾದೆ ಮಾತ್‌ಗ ನಮ್ಮ ಜೀವನಕ್ಕೆ ದಾರಿದೀಪ ಅಲಾ. ಶತಮಾನಗನೇ ಕಳ್‌ದರು ಗಾದೆ ಸುಳ್ಳಾದುಲೆತ ಹೇಳುವ ಮಾತ್‌ಗ ಗೊತ್ತೆ ಉಟ್ಟಲಾ, ಯಾಕೆ ತೇಲ್ರೆ ಅದ್ ಜನಗ ಅಥವ ಹಿಂದೆನ ಕಾಲದವರ ಹಿರಿಯರ ಮಾತ್‌ಗ.

ನಂಗೆ ಗೊತ್ತಿರ್‌ವ ಸುಮಾರ್ ಗಾದೆಗಳ್‌ನ ಒಂದು ಕಥೆನ ರೂಪಲ್ಲಿ ಹೇಳಿಕೆ ಕುಸಿ ಪಟ್ಟನೆ. ನಮ್ಮ ಹತ್ತ್‌ರದ ಹಳ್ಳೀಲಿ ಒಬ್ಬ ರೈತ ಜೀವನ ಮಾಡಿಕಂಡ್ ಇತ್ತ್. ನೆಮ್ಮದಿಗೇನ್ ಕಮ್ಮಿ ಇತ್ತ್‌ಲೆ ಹಂಗೆ ಇದ್ದಂವ ನಮ್ಮ ರೈತ ಪುಟ್ಟು. ಒಂದು ದಿನ ಯಾವುದೋ ಒಂದು ವಿಸಯಕೆ ರಗಳೆ ಮಾಡಿಕಂಡ್ ಕತ್ತಲೆ ಕಳ್ದ್ ರಾತ್ರೆ ಅಕನ ಮನೆ ಬುಟ್ಟ್ ಪ್ಯಾಟೆ ಸೇರಿ ಪಟ್ಟ ಕಷ್ಟ ಅಷ್ಟಿಷ್ಟಲ್ಲ. 'ಅಜ್ಞಾನಕ್ಕಿಂತ ಅಲ್ಪ ಜ್ಞಾನವೇ ಕಷ್ಟ' ಅಲಾ ಹಂಗೆ ಗ್ಯಾನ ಮಾಡಿಕೆ ಬುದ್ಧಿ ಇದ್ದಿದ್ದರೆ ಅವ ಹಳ್ಳಿ ಬುಟ್ಟು ಪ್ಯಾಟೆಗೆ ಹೋಗ್‌ತ್ತ ಇತ್ತ್‌ಲೆ ಅಲಾ. ಪ್ಯಾಟೆಗೆ ಹೋಗಿ ಏನೋ ಅಲ್ಲಿ ಇಲ್ಲಿತ ಸ್ವಲ್ಪ ಕೆಲ್ಸ ಮಾಡಿಕಂಡ್ ಪುಟ್ಟು ಒಂದಿಷ್ಟ್ ಸಂಪಾದನೆ ಮಾಡಿ 'ಅಂಕೆ ಇಲ್ಲದ ಕಪಿ ಲಂಕೆನೆಲ್ಲ ಸುಟ್ಟತ್ತ್‌ತ' ಹೇಳುವಂಗೆ ಅವನ ಹಿಡಿಯವು ಯಾರ್ ಇಲ್ಲದ ಹಂಗೆ ಆತ್. ಕಡೆಗೇ ಯಾವ ಕೆಲ್‌ಸ ಮಾಡದೇ ಪುಟ್ಟು ತನ್ನ ಊರವ್ಕೆ ರಂಗ ಅದರೆ ಹತ್ತ್‌ರದ ಊರಿಗೆಲ್ಲ ದಾನಿ ಆತ್. ಅಷ್ಟಕನ ಅವಂಗೆ ಅವನ ಸ್ನೇಹಿತರ್‌ಗೆ ಸಿಕ್ಕಿ 'ಮರಗಣಿಗೆ ಒಟ್ಟಿಗೆ ಆಡಿ ಅರಗಿಣಿ ಕೆಟ್ಟತ್ತ್‌ತ

ಹೇಳುವಂಗೆ ಅತ್ ಪುಟ್ಟನ ಪರಿಸ್ಥಿತಿ. 'ದನ ನಂಬಿರೂ ಜನ ನಂಬುದ್ ಕಷ್ಟತ' ಹೇಳುವಂಗೆ ಪುಟ್ಟು ಮರ್ತೆಹೋತ್.

'ಯಾರ್‌ದ್ದೋ ದುಡ್ಡುಂಗ ಎಲ್ಲಮ್ಮನ ಜಾತ್ರೆ' ಹಂಗೆ ಅತ್ ಪುಟ್ಟನ ಕಥೆ. ಅವನ ಹತ್ತ್‌ರ ದುಡ್ಡು ಇರಕನ ಅವನ ಸ್ನೇಹಿತರ್ಗ ತಿಂದ್, ಉಂಡ್, ತೇಗಿ, ದುಡ್ಡುನೆಲ್ಲಾ ಖಾಲಿ ಮಾಡಿ ಎಲ್ಲವೂ ದೂರ ಆಗಿ ಆತ್. 'ಅಡಕನ ಇರಕ್ಕನ ಊರೆಲ್ಲಾ ನೆಂಟ್‌ರ್‌ತ' ಹೇಳುವ ಸತ್ಯ ಪುಟ್ಟುಗೆ ಈಗ ಗೊತ್ತಾತ್.

ಹಿಂಗೆ ಪುಟ್ಟು ಗ್ಯಾನ ಮಾಡಿ ಊರು ಬುಟ್ಟತ್ "ಹಾದಿ ಬುಟ್ಟವಂಗೆ ಹದಿನೆಂಟ್ ದಾರಿತ" ಪುಟ್ಟು ಎಂಥೆಲ್ಲ ಮಾಡಿ ಒಂದುಸ ಕೈ ಸೇರ್‌ತ್ತ್‌ಲ್ಲೆ. ಕಡೆಗೆ 'ಕೆಟ್ಟ ಸಿವ ಪೊಟ್ಟ ಸಿವತ' ಕೆಟ್ಟ ಮ್ಯಾಲೆ ಬುದ್ಧಿಬಾತ್. ಇವಂಗೆ ಏನರ್ ಆಗ್‌ಲಿತ ಪುಟ್ಟು ಗ್ಯಾನ ಮಾಡಿ ದಾರಿ ಹಡ್ಕ್ತ್ತಿತ್ ನಾಡಿಗೆ ಬಾಕೆ. ಆದರೆ ಅವನೊಟ್ಟಿಗೆ ನಾಡಿಗೆ ಬಾಕೆ ಬಿಡಿಕಾಸ್ ಇಲ್ಲೆ. ಯಾವ ಒಬ್ಬ ಸ್ನೇಹಿತಸ ಅವಂಗೆ ದುಡ್ಡು ಕೊಟ್ಟ್ ಉಪಕಾರ ಮಾಡಿಕೆ ಬಾತ್‌ಲ್ಲೆ. ಸ್ವಲ್ಪ ಸ್ನೇಹಿತರ್‌ಗ ಬಂದ್ ಸಮ್‌ದಾನ ಮಾಡಿ ಹೋದೋ. ಇನ್ನ್ ಕೆಲವು ಜನ ಫೋನ್, ವಾಟ್ಸಪ್, ಮೆಸೇಜ್‌ನ ಮೂಲಕ ಸಮಾಧಾನ ಮಾಡ್‌ದ್ದೋ. ಆದರೆ ಎಲ್ಲವರ ತಲೇಲಿ ಇದ್ದದ್ ದುಡ್ಡ್ ಕೊಟ್ಟ್ ಕೇಳಿಕಂಬದಕ್ಕಿಂತ ಕೊಡದೇ ಇದ್ದರೆ ಒಳ್ಳೆದ್‌ತ ಸುಮ್ಮನೇ ಆದೋ. ಎಂಥಲ್ಲ ಮಾಡಿಕಂಡ್ ಪುಟ್ಟು ನಾಡ್‌ಗೆ ಅಮ್ಮನ ಹತ್ತ್‌ರ ಬಾತ್. ಎಷ್ಟೇ ಆದರ್ 'ಕಾಗೆಗೆ ಕಾಗೆ ಮರಿ ದೊಡ್ಡದಲ್ಲ'. ಇಂವವಮನೆಗೆ ಬಂದಂಗೆ ಇವನ ಕಷ್ಟನೆಲ್ಲ ಹೇಳಿಕೆ ಸುರು ಮಾಡ್‌ತ್ತ್. ಅವು 'ಓದು ಒಕ್ಕಾಲು ಬುದ್ದಿ ಮುಕ್ಕಾಲುತ' ಹೇಳಿ ಹಿಯಾಳ್‌ಸಿ ತಾರಮಾರ ಬೈದ್ ನಿಂಗೆ ಯಾಕೆ ಬೇಕಿತ್ ಪ್ಯಾಟೆಗೆ ಹೋಗಿ ಎಂಥ ಮಾಡಿ ಬಂದ. ಪ್ಯಾಟೆ ಯಾಕೆ ಬೇಕಿತ್ತ್‌ತ ಬೈಯಕೆ ಸುರು ಮಾಡ್‌ದ್ದೊ. ಅಪ್ಪ ಹೇಳ್‌ವೆ ನೋಡು ಪುಟ್ಟು ಪ್ಯಾಟೆ ನಮ್ಮಂತ್ವಕೆ ಲಾಯಿಕ ಅಲ್ಲರ, ಪ್ಯಾಟೆ ಪ್ಯಾಟೆನವ್‌ಕ್ಕೆ ಸರಿ ನಾಡ್ ನಾಡ್‌ವ್‌ಕ್ಕೆ ಸರಿ 'ನವಿಲ್ ಕೋಣಿಯಕ್ಕನ ನೋಡಿ ಚೆಂಬುಕ ನೆಗಡ್‌ತಗಡ' ಹಂಗೆ ಅತ್ ನಿನ್ನ ಕಥೆತ ಹೇಳ್‌ವೆ. ಆಗ ಪುಟ್ಟುಗೆ ಬೇಜರ ಆಗಿ ಮುಖನ 'ಇಂಗ್ ತಿಂದ್ ಕಪಿನಂಗೆ' ಆಗಿ ಸುಮ್ಮನೆ ಕುದ್ದದೆ ಹಂಗೆ ಪುಟ್ಟು ಇನ್ನು ಮುಂದೆ ಹೆತ್ತವ್ ಹೇಳ್ದ ಮಾತ್‌ನ ಕೇಳಕುತ ಗ್ಯಾನ ಮಾಡಿಕ್ಕೆ ಸುರು ಮಾಡ್‌ದೆ. ಮುಂದೆ ಅಂವ ಮನೆಲ್ಲೆ 'ಕೈ ಕೆಸರ್ ಆದರೆ ಬಾಯಿ ಮೊಸರುತ' ಹೇಳ್ವಂಗೆ ಕಷ್ಟ ಪಟ್ಟ್ ದುಡ್‌ದ್ದ್ ಒಳ್ಳೆ ಬುದ್ಧಿವಂತ, ಗುಣವಂತ, ಹಣವಂತ ಆಗಿ ಊರ್‌ಲ್ಲಿ ಒಳ್ಳೆ ಹೆಸ್‌ರ್‌ನ ತಕ್ಕಣ್‌ದ್ದೆ.

* * * * *

# ಏಡಿರಾಯನ ಕಥೆ

– ಕಾಳೆಯಂಡ ತಂಗಮ್ಮ ಅಪ್ಪಚ್ಚು

ಒಂದಾನೊಂದು ಊರಲ್ಲಿ ಲಿಂಗಪ್ಪನವರ ಮನೆ ಇತ್. ಅವನ ಹೆಣ್ಣ್‍ನ ಹೆಸರ್ ಗೌರಿ. ಅಂವನ ಮಗಳ ಹೆಸರ್ ಸುಮತಿ. ಅವಳು ಶಾಲೆಗೆ ಹೋಗ್ತಾ ಇದ್ದದೆ. ಅವಳ ಅವ್ವಂಗೆ ಒಂದು ದಿನ ಉಸ್ರು ಇರ್‍ದುಲೆ. ಆಗ ಸುಮತಿಗೆ ಹದ್‍ನೈದ್ ವರ್ಷ ಪ್ರಾಯ. ಹತ್ನೇ ಕ್ಲಾಸ್ ಓದುತಾ ಇತ್. ಅವಳ ಅವ್ವ ಹೊಟ್ಟೆ ಬೇನೆ ಜೋರಾಗಿ ಸತ್ತ್ ಹೋದೆ. ಲಿಂಗಪ್ಪನು ಸುಮತಿನು ಗೋಳಾಡುವೆ. ಆಗ ನೆರೆಮನೆವ್ರು ಊರೊವ್ರು ಬಂದ್ ಸೇರುವೆ. ಬಂದ ಜನಂಗ ಸೌದೆ ಕಡ್ದ್ ಗೌರಿನ ಕಾಟಕೆ ಹಾಕಿ ಸುಟ್ಟವೆ. ಸ್ವಲ್ಪ ದಿನ ಕಳ್ದ ಮೇಲೆ ಅವಳ ತಿಥಿ ಕರ್ಮ ಮಾಡುವೆ. ಲಿಂಗಪ್ಪಂಗೆ ಮನೆ ಕೆಲ್ಸ ಮಾಡೊವ್ರು ಯಾರು ಇಲ್ಲೆ. ಸುಮತಿಗೆ ಅಷ್ಟ್ಗೆ ಕೆಲ್ಸ ಗೊತ್ತಿಲ್ಲೆ. ಶಾಲೆಗೆ ಹೋಕೆ ಕಷ್ಟ ಆಗ್‍ತಿತ್. ಲಿಂಗಪ್ಪ ತುಂಬಾ ದೇವ್ರ ಭಕ್ತ. ಅಂವ ಇನ್ನೊಂದು ಮದ್ವೆ ಆದೆ. ಅವಳ ಹೆಸ್ರ್ ಗಂಗೆ. ಅವಳಿಗೆ ಒಂದು ಹೆಣ್ಣ್ ಕೂಸು ಆದೆ. ಕೂಸುನ ಹೆಸ್ರ್ ಕುಮತಿ. ಬೆಳಿತಾ ಬೆಳಿತಾ ದೊಡ್ಡವಳಾತ್. ಶಾಲೆಗೆ ಹೋಕೆ ಶುರು ಮಾಡ್ತ್.

ಚಿಕ್ಕಮ್ಮಂಗೆ ಸುಮತಿನ ಕಂಡರೆ ಆದುಲೆ. ಶಾಲೆಗೆ ಕಳ್‍ಸದೇ ಮನೆಲೇ ಇಸಿಕಂತ್. ಇತ್ತ ಸುಮತಿ ಚಿಕ್ಕಮ್ಮ ಹೇಳ್ದಂಗೆ ಮನೆ ಕೆಲ್ಸ ಮಾಡದೇ ಇದ್ದರೆ ಅವಳ್ಗೆ ಕೋಲು ತಕಂಡ್ ಹೊಡೆದು ಬೆನ್ನಿಗೆ ಗುದ್ದುದು. ಹೀಂಗೆ ಎಲ್ಲಾ ತರಲಿ ಅವಳ್ಗೆ ಹಿಂಸೆ ಕೊಡ್ತಿತ್. ಚಿಕ್ಕಮ್ಮ ಸುಮತಿಗೆ ದಿನಲಿ ಒಂದು ಹೊತ್ತು ಊಟ ಕಷ್ಟಲಿ ಕೊಡ್ತಿತ್. ತನ್ನ

ಮಗಳಿಗೆ ಒಳ್ಳೆ ತಿಂಡಿ ಊಟ ಎಲ್ಲ ವಂಚನೆ ಮಾಡಿ ಕೊಡ್ತಿತ್ತ್. ಇದೆಲ್ಲಾ ನೋಡ್ದ ಸುಮತಿಗೆ ಅಳ್ಕೆ ಶುರು ಮಾಡ್ತ್. ಸುಮತಿ ಮನೆ ಬುಟ್ಟ್ ದೂರ ಹೋದೆ. ಹೋಗ್ತಾ ಹೋಗ್ತಾ ಮೂರು ಮೈಲಿ ದೂರಲಿ ಒಂದು ಹೊಳೆ ಸಿಕ್ಕಿದೆ. ಹೊಳೆ ದಡೆಲಿ ಒಂದು ಗೋಳಿ ಮರ ಇದ್ದದೆ. ಆ ಮರ ದೊಡ್ಡ ಚಪ್ಪರದಂಗೆ ಇತ್ತ್. ಸುಮತಿ ಅತ್ತ್‌ಕಂಡ್ ಆ ಮರದಡಿಲಿ ಕುದ್ದದೆ. ಆಗ ಮೇಲೆ ಈಶ್ವರನು ಪಾರ್ವತಿನು ಹೋತಿದ್ದವೆ. ಸುಮತಿ ಅಳುದರ ಕೇಳಿ ಈಶ್ವರನು ಪಾರ್ವತಿನು ಅಲ್ಲಿಗೆ ಬಂದವೆ. ಸುಮತಿನ ವಿಚಾರ್ಸುವೆ. ಅವಳು ಆದ ಹೋದ ಕತೆನ ಹೇಳ್ದೆ. ಅವು ಸುಮತಿನ ಸಮಧಾನ ಮಾಡಿ ಮೂರು ಕಲ್ಲ್‌ನ ಮಂತ್ರಿಸಿ ಕೊಟ್ಟವೆ. ಈ ಕಲ್ಲ್‌ಗಳ ಮೂರು ದಿಕ್ಕ್‌ಗಳಿಗೆ ಹಾಕ್. ಒಂದು ದಿಕ್ಕ್‌ಗೆ ಹಾಕ್‌ಕನ ಹೊಳೆಂದ ಏಡಿರಾಯ ಬಳಂ ಬಳಂತ ಹೇಳಿಕಂಡ್ ನೀರ್ ಮೇಲೆ ಬಾದು; ನೀ ಹೆದರ್ಬಡ. ಇನ್ನೊಂದು ಕಲ್ಲ್ ಹಾಕ್ ಏಡಿರಾಯನ ಕೊಂಬು ಚಿರಿಕಾಲ್ ಮುರ್ದ್ ಹೋದೆ. ಮನುಷ್ಯ ಆಗಿ ನಿನ್ನ ಗಂಡ ಆಗಿ ತಬ್ಬಿಕಂಡದೆ. ಅಲ್ಲಿಂದ ಏಡಿರಾಯ ಸುಮತಿ ಗಂಡ ಹೆಣ್ಣ್‌ಂತ ಹೆಸರಾದೆ. ಹಂಗೆ ಹೇಳಿ ಈಶ್ವರನು ಪಾರ್ವತಿನು ಮಾಯ ಆದವೆ. ಅಷ್ಟರಲ್ಲಿ ಗಂಗೆಗೆ ಪುನ ಒಂದು ಗಂಡ್ ಕೂಸು ಆದೆ. ಆ ಕೂಸುನ ಹೆಸ್ರ್ ಚಿಕ್ಕಮ್ಮಂಗೆ ಮನೆಲಿ ಅಡ್ಗೆ ಮಾಡಿಕೆ ಯಾರಿಲ್ಲೆ ತನ್ನ ಮಗಳ್ ಕುಮತಿ ಹಾಸಿಗೆಂದ ಏಳ್ತುದಲೆ. ಯಾವ ಕೆಲ್ಸನೂ ಮಾಡ್ದುಲೆ. ಹೇಂಗೆ ಕೆಲ್ಸ ಮಾಡೊಕುಂತೇಳಿ ಗೊತ್ತಿಲ್ಲೆ. ಲಿಂಗಪ್ಪ ಎರಡನೇ ಹೆಣ್ಣ್‌ನ ಕೇಳ್ದೆ ಸುಮತಿ ಎಲ್ಲಿಗೆ ಹೋಗುಟುಂತ. ಗಂಗೆ ಸುಳ್ಳು ಹೇಳ್ದೆ. ಸುಮತಿ ನೆಂಟ್ರ ಮನೆಗೆ ಹೋಗುಟು. ನಾಳೆ ಬಂದದೆಂತ. ಸುಮತಿನು ಏಡಿರಾಯನು ಎಲ್ಲೋ ಒಂದು ಊರುಲಿ ಗುಡಿಸಲ್ಲೆ ಮನೆ ಕಟ್ಟಿಕಂಡ್ ವಾಸ ಇದ್ದವೆ.

ಸುಮತಿನ ಚಿಕ್ಕಮ್ಮ ಬಹಳ ಕೆಟ್ಟ ಹೆಂಗ್ಸ್. ಸುಮತಿನ ಕಡೆ ನೆಂಟ್ರ್ ಬಂದರೆ ಅವ್ಕೆ ಊಟಕೆ ಕೊಡ್ದು ಗಂಜಿ ಅನ್ನ ಕುಡಿಯಕೆ ಮೆಣ್ಸ್‌ನ ನೀರ್ ಹೀಂಗೆ ಎಲ್ಲಾ ಮಾಡ್ತಿತ್ತ್. ಅವ್ಳ ನೆಂಟ್ರ್ ಬಂದರೆ ಬಿರಿಯಾನಿ ಮಾಂಸದ ಊಟ ಹೀಂಗೆ ಗದ್ದಲ ಮಾಡ್ತಿತ್ತ್. ಮನೆಗೆ ಯಾರಾರ್ ಭಿಕ್ಷೆವು ಬಂದರೆ ಗಂಗೆ ಗುಂಡ್ ಕಲ್ಲ್‌ನ ಭಿಕ್ಷೆವುಕೆ ಕೊಡ್ತಿತ್ತ್. ಭಿಕ್ಷೆದೊವು ಶಾಪ ಹಾಕಿಕಂಡ್ ಹೋತಿದ್ದೊ. ಸುಮತಿ ಅನ್ನ ಬಾಳ್ಲೆಗೆ ಹಾಕಿ ಕೊಟ್ಟರೆ ಅನ್ನನ ಕಾಲ್‌ಲಿ ಒದ್ದ್ ರಟ್ಟ್‌ಸ್‌ತಿತ್ತ್. ಹೀಂಗೆಲ್ಲಾ ಹಿಂಸೆ ಮಾಡ್ತಿತ್ತ್. ಅಪ್ಪ ಲಿಂಗಪ್ಪ ಮಗಳ್ ಮನೆಗೆ ಬಾರದಕೆ ಊರೊಳಗೆ ಹುಡ್ಕಿಕಂಡ್ ಹೋದೆ. ಸುಮತಿನು ಏಡಿರಾಯನು ಒಂದು ಗುಡಿಸಲ್ ಮನೆ ಒಳಗೆ ಇರ್ದರ ಕಂಡದೆ. ಅಪ್ಪ ಲಿಂಗಪ್ಪ ಮಗಳ ನೋಡಿ ಬೇಸರ ಪಟ್ಟದೆ. ಸುಮತಿನು ಏಡಿರಾಯನು ಲಿಂಗಪ್ಪನ ಕಾಲ್‌ಗೆ ಅಡ್ಡ ಬಿದ್ದವೆ. ಸುಮತಿಗೆನು ಏಡಿರಾಯಂಗು ಒಂದು ಹೊತ್ತು ಊಟಕೆ ಅಕ್ಕಿ ಇಲ್ಲೆ. ಏಡಿರಾಯ ಏನ್ ಮಾಡ್ದೆ ಕಾಡಿಗೆ ಹೋಗಿ ಒಂದು ಹೊರೆ ಸೌದೆ ತಂದ್ ಮಾರಿ ಅಕ್ಕಿ ತಂದ್ ಕೊಟ್ಟದೆ. ಅದರ ಅನ್ನ ಮಾಡಿ ಗಂಡನ ಕರ್ದ್ ಬಾಳ್ಲೆಗೆ ಬಡ್ಸಿ ಕೊಟ್ಟದೆ. ಸುಮತಿಗೆ ಅನ್ನ ಇಲ್ಲದರ ನೋಡಿ ಇಂವನ ಬಾಳ್ಲೆಲೇ ಅವಳನೂ ಊಟಕೆ

ಹೇಳ್ದೆ ಗಂಡ ಹೆಣ್ಣ್ ಇಬ್ಬೊರೂ ಊಟ ಮಾಡುವೆ.. ಏಡಿರಾಯ ಸುಮತಿನ ಪ್ರೀತಿಂದ ನೋಡಿಕಂಡದೆ.

ಏಡಿರಾಯ ಹೀಂಗೆ ಯಾಗೋಳು ಸೌದೆ ಮಾರಿ ಜೀವನ ಮಾಡ್ತಿತ್ ,ಒಂದು ದಿನ ಸೌದೆ ತೆಕಂಡೊವ್ರು ದುಡ್ಡು ಕೊಟ್ಟಿತ್ಲೆ. ಆ ದಿನ ಊಟಕೆ ಅಕ್ಕಿ ಇಲ್ಲೆ. ಏಡಿರಾಯ ತುಂಬಾ ದೇವರ ಭಕ್ತ. ಆ ದಿನ ಊಟಕೆ ಇಲ್ಲದೆ ಸಿಹಿ ಕುಂಬಳ ಸೊಪ್ಪು ತಂದ್ ಬೇಯ್ಸಿ ಇಸಿದ್ದೊ. ಶಿವನು ಪಾರ್ವತಿನು ಬಂದವೆ. ಸುಮತಿಗೆ ಒಂದೇ ಕಂಚಿನ ಗಂಗಳ ಇರ್ದು. ಹೇಂಗೆ ಕೊಡ್ದುಂತ ಏಡಿರಾಯ ಬೇಜಾರ ಮಾಡ್ದೆ. ನಾವ್ಗೆ ಒಂದೇ ಗಂಗಳ ಸಾಕ್. ನಾವ್ ಸತಿಪತಿಗ. ಸುಮತಿ ಬೇಯಿಸಿದ ಸೊಪ್ಪುನ ಗಂಗಳಕೆ ಹಾಕಿ ಕೊಟ್ಟವೆ. ಶಿವನು ಪಾವರ್ತಿನೂ ಬೇಯಿಸಿದ ಸೊಪ್ಪುನ ಲಾಯಿಕಿ ತಿಂದವೆ. ತುಂಬಾ ಚೆನ್ನಾಗಿ ಉಟ್ಟುಂತೇಳಿ ಸುಮತಿ ಮತ್ತೆ ಏಡಿರಾಯಂಗೆ ನೀವ್ಗೆ ಏನೆಲ್ಲ ಬೇಕೊ ಅದೆಲ್ಲಾ ಆಗಲಿ . ಮೊದಲು ಗಂಗಳಕೆ ಒಂದು ಬಾಳೆ ಹಣ್ಣ್ ಹಾಕ್. ಆಮೇಲೆ ಆ ದುಡ್ಡು ಹಾಕ್ ಹಂಗೆ ವರಕೊಟ್ಟವೆ. ಹಾಂಗೆನೆ ಏಡಿರಾಯ ಗಂಗಳಕೆ ಒಂದು ಬಾಳೆಹಣ್ಣ್ ಹಾಕಿತ್. ಗಂಗಳ ತುಬಾ ಬಾಳೆ ಹಣ್ಣ್ ಆತ್. ಅದರ ಒಂದು ಕುಕ್ಕೆಗೆ ಹಾಕಿತ್. ಕುಕ್ಕೆ ತುಂಬಾ ಹಣ್ಣ್ ಆತ್. ಹಂಗೆ ಗಂಗಳಕೆ ಒಂದು ರೂಪಾಯಿ ಹಾಕಿತ್ ಗಂಗಳ ತುಂಬಾ ಹಣ ಆತ್. ಆವಂಗೆ ಏನೆಲ್ಲಾ ಬೇಕೋ ಅದೆಲ್ಲಾ ಆತ್. ಏಡಿರಾಯ ಊರಿಗೆ ಶ್ರೀಮಂತ ಆತ್. ಊರು ಜನಂಗ ಎಲ್ಲವೂ ಏಡಿರಾಯನ ಹಕ್ಕಲೆ ಬಾಕೆ ಸುರು ಮಾಡ್ದೊ. ಬಟ್ಟೆ ಬೇಕಾದೊವ್ಕೆ ಬಟ್ಟೆ, ಹಣ ಬೇಕಾದೊವ್ಕೆ ಹಣ. ಮನೆಲಿ ಏನೆಲ್ಲಾ ಬೇಕು ಅದೆಲ್ಲಾ ದಾನ ಕೊಡುತ್ತಿದ್ದೊ. ಇವರ ಪರೀಕ್ಷೆ ಮಾಡೊಕುಂತೇಳಿ ಶಿವನು ಪಾರ್ವತಿನು ಬಂದವೆ. ನಮ್ಮ ಗಂಗಳ ನಾವ್ಗೆ ಕೊಡಿಂತ ಕೇಳ್ವೆ. ಊಟ ಮಾಡಿಕಂಡ್ ಹೇಳ್ವೆ ಏಡಿರಾಯನು ಸುಮತಿನು ಸೇರಿ ಶಿವಂಗು ಪಾರ್ವತಿಗು ಗಂಗಳ ಕೊಟ್ಟವೆ. ಸುಮತಿನೂ ಏಡಿರಾಯನು ಹಿಂದೆ ಹೇಂಗೆ ಬದ್‌ಕ್‌ತಿದ್ದೊ ಈಗಲೂ ಹಾಂಗೆ ಬದ್ಕವೆ ಅದೇ ರೀತಿಲಿ ಬದ್ಕಿಕೆ ಆತ್. ಸುಮತಿನು ಏಡಿರಾಯನು ಶಿವ ಪಾವರ್ತಿನ ಬೇಡುವೆ ನಮ್ಮ ಮೇಲೆ ಭಕ್ತಿ ಇದೆ ಇಲ್ಲೆಂತ ನಿಮ್ಮ ಪರೀಕ್ಷೆ ಮಾಡ್ದೊ. ಆಗ ಸುಮತಿನು ಏಡಿರಾಯನು ಹೇಳ್ವೆ ನೀವೇ ನಮ್ಮ ಅಪ್ಪ ಅಮ್ಮ ನಿಮ್ಮ ಬುಟ್ಟರೆ ನಾವ್ಗೆ ಬೇರೆ ಯಾರ್ ಗತಿ ಇಲ್ಲೆಂತ ಶಿವನ ಪಾರ್ವತಿನ ಕಾಲ್‌ಗೆ ಅಡ್ಡ ಬಿದ್ದವೆ. ಆಗ ಗಂಗಳ ವಾಪಾಸ್ ಕೊಟ್ಟವೆ.

* * * *

# ಕೂಡಿ ಬಾಳಿರೆ ಮಾತ್ರ ಅದೊಂದು ಬಾಳ್

**– ಪೂಜಾರಿರ ಜಿ. ಮಾದಪ್ಪ**

ಒಂದು ಊರ್‌ಲಿ ಒಂದು ತುಂಬಿ ತುಳುಕಾಡುವಂತ ಸಂಸಾರ ಇತ್ತ್. ಈ ಕಥೆನ ನನ್ನ ಮುತ್ತಾತ ಮತ್ತು ಮುತ್ತಜ್ಜಿ ಕುದ್‌ಕಂಡ್ ಕತ್‌ಲ್ ಕತ್ತಲ್ ಆಕಾಕನ ಅಂದರೆ ಮುಸ್ಸಂಜೆತ್ತೇಳುವ ಆ ಸಮಯಲಿ ಅವರ ಮೊಮ್ಮಕಳ್‌ನೆಲ್ಲಾ ಕೂರಿಸಿಕೊಂಡ್ ಮನೆಯ ಕಯ್ಯಾಲೆಲಿ ಹೇಳುತ್ತಿದ್ದೊ. ಇದ್ ಕಟ್ ಕಥೆ ಅಲ್ಲ ಬುದ್ದಿವಾದ ಹಂಗೆನೆ ನೀತಿ ನಡ್‌ತೆ, ಬದುಕಿ ಬಾಳಿಕೆ ಬೇಲಿಯಾಗಿ ಅಮರವಾಗಿ ನಿಲ್ಲಿಸಿಕೊಂಬಂತಾ ಕಥೆ. ಇದ್ ಕೇವಲ ಮೊಮ್ಮಗ ಮತ್ತೆ ಮರಿ ಮಕ್ಕಳಿಗೆ ಮಾತ್ರ ಅನ್ವಯಿಸುದುಲೆ, ನಾವೆಲ್ಲ ತಿಳಿಕಣ್‌ವಂತದ್. ಆ ಸಮಯಕ್ಕೆ ಸರಿಯಾಗಿ ಅವರ ತುಂಬಿದ್ಕುಟುಂಬದ ಎಲ್ಲವು ಕುದ್‌ಕಂಡ್ ಕೇಳುವಂತ ಮನೋರಂಜನೆಯ ಕಥೆಗ. ಅದೇ ಸಮಯಕ್ಕೆ ಸರಿಯಾಗಿ ಮನೆ ಗುಡಿಸಿ, ಸಗಣಿ ನೀರ್ ಹಾಕಿ ಸಂಜೆಯ ದೇವರ ದೀಪನ ಹೊತ್ತಿಸಿದ್ದವೆ. ಈಗನಂಗೆ ವಿದ್ಯುತ್ ಶಕ್ತಿ ಇತ್‌ಲೆ. ಒಂದು ಬುಡ್ಡಿ ದೀಪ, ಲ್ಯಾಟನ್, ಮಯಣದ ಬತ್ತಿ ಇತ್‌ಲರೆ. ವಾಲೆ ಮರದ ಎಣ್ಣೆ ಅದರ ಮಡ್ಡಿನ ಬತ್ತಿನ ಮಾಡಿ, ಒಂದು ಮಣ್ಣುಂಡೆ ಮಾಡಿ, ಅದರ್‌ಲಿ ವಾಲೆ ಮರದ ಬತ್ತಿನ ಹೊತ್ತಿಸಿಡ್‌ತ್ತಿದ್ದೋ. ಆಗ ಎಲ್ಲವೂ ಬಂದು ಸುತ್ತ ಕುದ್‌ಕಂಡವೆ. ಅಜ್ಜಿ ಸುರು ಮಾಡ್‌ದೆ ನೋಡಿ, ಮಕ್ಕಳೇ, ಈಗ ನಮಗೆ ವಯಸಾಗ್‌ತಾ ಬಾತ್ ನಾವು ತಿಳ್‌ದಂತ ಅಥವ ಹಿಂದಿನಿಂದಲೇ ಹೇಳಿಕಂಡ್ ಬರ್‌ತಿದ್ದ ನೆನಪಿನ ನಡುಪುನ ಕಥೆನ ನಿಮಿಗೆಲ್ಲ ಹೇಳಿನೆ. ನೀವು ಮನಸ್‌ಲಿ ಗಟ್ಟಿ ಮಾಡಿ ಇಟ್‌ಕಂಡ್ ಮುಂದೆ ಈ ನಮ್ ತುಂಬಿ ತುಳುಕುವ ಸಂಸಾರದ ಹೆಸ್ರನ ಎಲ್ಲವು ಮೆಚ್ಚಿ ಹಂಗೆನೆ ಪ್ರತಿಯೊಬ್ಬ ಕುಟುಂಬಸ್ಥರ್ ಅದೇ ರೀತಿ ನಡ್‌ಕಂಬಕ್ಕೆ ಅನುಕೂಲ ಆಗುವಂಗೆ ನೀವೆಲ್ಲು ನಡ್‌ಕಂಬಕುತೇಳ್‌ದೆ. ಎಲ್ಲಾವು ಇದೆಂತ ಆಶ್ಚರ್ಯದ ಕಥೆಯಾಗಿರ್‌ದಪ್ಪ!? ನಮ್ಮ ಮುತ್ತಜ್ಜಿ ಹೇಳ್‌ದ್ ಕೇಳ್‌ಕಾಕಕನ ಅಜ್ಜಿ ಸುರು ಮಾಡೆಬುಡ್ತ್. ನೋಡಿ ಮಕ್ಕಳೇ ನೀವು ಬಾಳಾ ಪುರಾತನ ಕಾಲಲ್ಲಿ ನಡ್‌ದಂತ ಒಂದು ಧರ್ಮ, ನೀತಿ ನಡೆತನ ಕಥೆನ ಕೇಳಿರುವರಿ ಅಥವಾ ಕೇಳಿದೇ ಇದ್ದರೆ ಈಗ ತಿಳ್ಕಣಿ.

ನಮ್ಮ ಭಾರತದೇಶ ನೀತಿ, ನ್ಯಾಯ, ಧರ್ಮನ ಎತ್ತಿ ಇಡ್‌ದಂತ ದೇಶ. ಪ್ರತಿಯೊಂದು ಕೆಲಸ ಕಾರ್ಯಗಳಲ್ಲಿ ದೇವರೆಂಬ ಶಕ್ತಿನ ಮುಂದಿಟ್ಟ್ ಕೆಲ್ಸ ಕಾರ್ಯಗಳ್ನ ಮಾಡಿಕಂಡ್ ಬರುವಂತ ದೇಶ ಈ ದೇಶದೊಳಗೆ ಸಣ್ಣ ಸಣ್ಣ ನೀತಿವಂತರ್, ಧರ್ಮಿಷ್ಟರ್ ಕೀರ್ತಿಶಾಲಿಯಾಗಿರುವ ಬಹಳಷ್ಟ್ ರಾಜ್ಯಗ ರಾಜರ ಆಡಳಿತದಲ್ಲಿತ್, ಅದರ್‌ಲಿ ಅತಿ ಶ್ರೇಷ್ಠವಾದದ್ದ್ ಅಯೋಧ್ಯೆ. ಈ ಅಯೋದ್ಯೆಯ ರಾಜ ದಶರತ ಮಹಾರಾಜ, ಈ ರಾಜಂಗೆ ಮೂರು ಜನ ಹೆಣ್‌ಗ (ಪತ್ನಿಯರ್), ಅವುಕೆ ನಾಲ್ಕ್‌ಜನ ಗಂಡ್ ಮಕ್ಕ. ಈ ನಾಲ್ಕ್ ಮಕ್ಕಳಿಗೆ ಹಿರಿಯವನೇ ಶ್ರೀ ರಾಮಚಂದ್ರ. ಈ ಶ್ರೀ ರಾಮಚಂದ್ರ ದೇವತಾಪುರುಷ, ಅವರ ಧರ್ಮಪತ್ನಿ ಪ್ರತಿವ್ರತೆಯಾದ ಸೀತಾದೇವಿ.

ಇದ್ ಸಾಧಾರಣವಾಗಿ ಎಲ್ಲವೂಕೂ ಗೊತ್ತಿರುದುತ್ತೇಳ್ದು ನನ್ನ ಅಭಿಪ್ರಾಯ. ಆದರೆ ಆ ದಂಪತಿಗಳ ನೀತಿ ನಡ್‌ತೆ ಉದಾರತನ ಕೂಡಿ ಬಾಳುದು ಅಥವಾ ಹೊಂದಿ ಬಾಳುದು.

ಪ್ರಾಣಿ ಪಕ್ಷಿಗಳ ಮ್ಯಾಲೆ ಇಟ್ಟಂತಾ ಮಮತೆ ಸತ್ಯ ಧರ್ಮ ಹಂಗೆನೆ ಪತಿವ್ರತೆತನ ಏಕಪತ್ನಿ ತನ ಅದೂ ಅಲ್ಲದೆ ಕೊಟ್ಟ ಮಾತ್ ತಪ್ಪದೆ ನಡ್ದ್ ಕೊಂಬಂತಹ ನಡ್‌ತೆಗ ಹಿಂಗೆ ಹತ್ತಾರ್. ಅದರ್‌ಲಿ ಮುಖ್ಯವಾಗಿ ಶ್ರೀರಾಮ ಇನ್ನೇನ್ ರಾಜ್ಯ ಪಟ್ಟ ಅಲಂಕರಿಸಿ ಸಿಂಹಾಸನಲಿ, ಕೂರ್‌ವಂತ ಸಮಯಲಿ ಆದಂತ ದುರಂತ ಅಡಚಣೆ ತನ್ನ ಅಪ್ಪನ ಮಾತ್‌ನ ಪೂರೈಸಿಕ್ಕಾಗಿ ಹದಿನಾಲ್ಕ್ ವರ್ಷ ಅವಧಿಯ ವನವಾಸಕ್ಕೆ ಹೋದಂತ ತ್ಯಾಗಿ, ಈ ಕಾಲಲಿ ಯಾರಾದರ್ ಒಳೋನಾ, ಖಂಡಿತಾ ಇಲ್ಲೆ, ಇರ್‌ಕಿಲೆ. ಅದಿರ್‌ಲಿ ಗಂಡ ರಾಜನಾದೆ, ನಾವೆನಾರ್ ಈ ರಾಜ್ಯಲಿ ಏನೇನೂ ಆಗಿ ಮರೆಯಕುತ್ತೇಳುವ ಬಹಳಷ್ಟ್ ಆಸೆಗಳ ಇಟ್‌ಕಂಡ ಅವರ ಹೆಣ್ ಅರ್ಧಾಂಗಿ ಗಂಡನ ಸೇವೆಯೇ ನನ್ನ ಪತಿವ್ರತೆ ತನದ ಸೇವೆತ್ತೇಳಿ ಒಂದೇ ಗಟ್ಟಿ ಮನ್ಸ್ ಮಾಡಿ ಗಂಡನಾದ ಶ್ರೀ ರಾಮನೊಟ್ಟಿಗೆ ವನವಾಸಕ್ಕೆ ಹೋದೆ. ಅಂದರೆ ಕೂಡಿ ಬಾಳುದೆ ಒಂದ್ ಬಾಳ್‌ತೇಳ್ದನ್ನ ತನ್ನ ಮನದಾಳಿ ಅಳವಡಿಸಿಕಂಡ್ ಹೋದೆ. ಅಲ್ಲದೆ ಒಂದು ಕೂಡಿ ಬಾಳುವ ಸಂಸಾರಲಿ ಹುಟ್ಟಿ ಬೆಳ್ದಂತ ತನ್ನ ಚಿಕ್ಕವ್ವ ಮಂಜನಾದ ಲಕ್ಷ್ಮಣ ಸಹ ನಮ್ಮ ಸಂಸಾರಲಿ ಹುಟ್ಟಿ ಬೆಳ್ದ ಅಣ್ಣ, ಅಣ್ಣನನ್ನೇ ಜೀವನದ ಮುಡುಪಾಗಿಟ್ಟ ಅತ್ತಿಗೆ ಸೀತಾಮಾತೆ ವನವಾಸಕ್ಕೆ ಹೊರಟ ಮ್ಯಾಲೆ ನಮಗೆ ಈ ರಾಜ್ಯ ಯಾಕೆ ಬೇಕ್, ಈ ಆಸ್ತಿ ಅಂತಸ್ತ್ ಯಾಕೆ ಬೇಕ್ ನನ್ನ ಸ್ವಂತ ಅಣ್ಣ ಅತ್ತಿಗೆಯೊಟ್ಟಿಗೆ ನಾನ್ ಸಹ ಕಾಡ್‌ಲಿ ವಾಸ ಮಾಡಿನೆತ್ತೇಳಿ ಅವರೊಟ್ಟಿಗೆ ಕಾಡಿಗೆ ಹೋದೆ. ಇಂತಾ ಸಂಸಾರನ ನಾವು ಮೂಲ ಆಧಾರವಾಗಿಟ್‌ಕಂಡ್ ಅವರ ತ್ಯಾಗಮಯವಾದ ಜೀವನನ ನಾವು ನೀವೆಲ್ಲವು ಅನುಸರಿಸಿಕಂಡ್ ಹೋದ್‌ರೆ ನಾವು ಮನ್‌ಸರ್. ಹಂಗೆನೆ ನಮ್ಮ ಈ ತುಂಬಿ ತುಳುಕುವ ಈ ಸಂಸಾರ ಶ್ರೀರಾಮ, ಸೀತಾ ದೇವಿಯ ನೀತಿ ದಯ, ಧರ್ಮಲಿ ನಡ್ಕಂಡ್ ಹೋಕು. ಅದೇ ಪುಣ್ಯ ಎಂದೆಂದಿಗೂ ಅಳಿಯದೇ ಕೂಡಿ ಬಾಳುವ ಸಂಸಾರ ಅದೆಂಗೆತೇಳಿ ತಿಳ್ಕಣಿ. ಶ್ರೀರಾಮ ಮತ್ತೆ ಸೀತಾಮಾತೆನ ನಾನು ಇಲ್ಲಿ ಹೊಗಳಿ ಕಥೆ ಹೇಳ್ದ್ ಮಾತ್ರ ಅಲ್ಲ. ನಾವು ಅವರಿಬ್ಬರ್‌ನ ದೇವರ ಸ್ಥಾನದಲಿ ಇಟ್ಟ ಪೂಜಿಸ್ತೋಳೊ, ಅದೆಂಗೆತ ಹೇಳ್ರೆ ನಮ್ಮ ಹೈದ ಮತ್ತು ಗೂಡೆನ ಶ್ರೀ ರಾಮಚಂದ್ರಂಗೂ ಮತ್ತು ಸೀತಾದೇವಿಗೂ ಹೋಲಿಸಿ ಆ ಮದುವೆ ಚಪ್ಪರದ ಮಂಟಪದ ಸೀತಾವಳಿ ಚಪ್ಪರದ ಮತ್ತೆ ಮೇಲ್ಕಟ್ಟಡಿಲಿ ಹೇಳಿವೆ. ಹಂಗೆನೆ ಅದೇ ಸೀತಾವಳಿ ಚಪ್ಪರದಡಿಲಿ ಗಂಡಿಗೆ ಹೆಣ್ಣ್‌ನ ಧಾರೆ ಹೊಯ್ದ್ ಕೊಡ್‌ಕಾಕನ ಮತ್ತೆ ಅದೇ ಧಾರಾ ಮಂಟಪದಡಿಲಿ ಹೆಣ್ಣು ಗಂಡ್ ವಹಿಸಿ ಕೊಡ್‌ಕಾಕಕನ ಶ್ರೀರಾಮ ಚಂದ್ರನಂತ ಗಂಡಿಗೆ ಸೀತಾದೇವಿಯಂತ ನಮ್ಮ ಕನ್ನಿಕೆನ ಕೂಡಿದ ಕುಲಸ್ಥರ ಮುಂದೆ ದಿಬ್ಬಣ ಮುಖ್ಯಸ್ಥನ ಕೈಗೆ ವಹಿಸಿಕೊಟ್ಟವೆ. ಅಂದರೆ ನಾವು ನೀವೆಲ್ಲವೂ ಶ್ರೀ ರಾಮಚಂದ್ರ ಮತ್ತು ಸೀತಾದೇವಿಯ ನೀತಿ ನಡತೆಗಳನ್ನು ಪಾಲಿಸಿಕಂಡ್ ಕೂಡಿ ಬಾಳಿರೆ ಅಂದೊಂದು ಬಾಳ್.

* * * * *

# ಕುಂಞಣ್ಣ ಹೈದನ ಅದೃಷ್ಟದ ಕಥೆ

– ಕೊಕ್ಕಲೆ ಮಾಲಿನಿ ಮುತ್ತಪ್ಪ

ಒಂದು ಊರಿತ್. ಆ ಊರ್‌ನ ಸುತ್ತ ಮುತ್ತ ಹಸಿರ್‌ಂದ ಕೂಡ್ದ ಮರಗ, ಹಕ್ಕಿಗ, ಬೆಟ್ಟ ಗುಡ್ಡ ಇತ್. ಅದ್ರ ಮಧ್ಯೆಲಿ ಒಂದ್ ಮನೆ ಇತ್. ಆ ಮನೆತೇಳಿರೆ ಸುಮಾರ್ ಶತಮಾನ ಕಳ್ದ ಹಳೇ ಮನೆಯಾಗಿತ್ .ಆ ಊರ್ ಕೇರಿಲಿ ಆ ಮನೆಗೆ ಅದಷ್ಟ್ ವಯಸ್ಸ್ ಯಾವ ಮನೆಗೂ ಆಗಿತ್ಲೆ. ಆ ಮನೆನ ಮುಖ್ಯಸ್ಥ ಧರ್ಮರಾಜ. ಹೆಣ್ಣ್, ಮಕ್ಕ, ಅಮ್ಮ, ಅಪ್ಪನ ಜೊತೆಲಿ ವಾಸ ಮಾಡ್ಕಂಡ್ ಇತ್ ಧರ್ಮರಾಜಂಗೆ ಒಂದು ಮಂಞ ಇತ್. ಅವನ ಹೆಸ್ರ್ ಕುಂಞಣ್ಣ. ಕೂಸು ಆಗಿರ್ಕನ ಒಬ್ಬ ಜೋಯಿಸ ಅವನ ಕೈ ಗೆರೆನ ನೋಡಿ "ನೀ ಒಬ್ಬ ಅದೃಷ್ಟವಂತ. ಅದೃಷ್ಟ ನಿನ್ನ ಹುಡ್ಕಿಕಂಡ್ ಬಂದದೆಂತ" ಕಣಿ ಹೇಳಿತ್. ಅವನ ಮಾತ್‌ನ ನಂಬಿ ಕುಂಞಣ್ಣ ಹೈದ ದೊಡ್ಡವ ಆದ ಮ್ಯಾಲೆ ಕೆಲ್ಸ  ಮಾಡ್ದರ್‌ನೇ ಬುಟ್ಟ್ ಜೋಯಿಸ ಹೇಳ್ದ ಅದೃಷ್ಟನ ಕಾದ್ ಕುದ್ದತ್.

ಕುಂಞಣ್ಣ ಹೈದಂಗೆ 28 ವರ್ಷ ಕಳ್ದರೂ ಆ ಅದೃಷ್ಟ ಅವನ ಹಕ್ಕಲೆ ಬಾತ್ಲೆ. ಎಲ್ಲವೂಕ್ಕು ಅದೃಷ್ಟ ಸಿಕ್ಕಿದೆ ನಂಗೆ ಏಕೆ ಸಿಕ್ಕುದ್ಲೆ? ಅಂತ ಮನ್ಸಲೇ ಧ್ಯಾನ ಮಾಡಿಕಂಡ್ ಚಿಂತೆಲಿ ಕುದ್ದತ್. ಕುಂಞಣ್ಣ ಹೈದನ ಸ್ಥಿತಿ ನೋಡಿ ಅವನ ಭಾಮ್ಮೈದಂಗೂ ಚಿಂತೆ ಹತ್ತಿತ್. 7 ಸಮುದ್ರ ದಾಟಿರೇ ಸಿಕ್ಕುದೇ ಶಿಂಬಾ ಪರ್ವತ ಅಲ್ಲಿ ಒಬ್ಬ ಋಷಿ ತಪ್ಪಸ್‌ಗೆ ಕುದ್ದಿದೆ. ಅಂವಂಗೆ ಎಲ್ಲಾ ಗೊತ್ತು. ನಿನ್ನ ಅದೃಷ್ಟ ಯಾಗ ಬಂದದೆ. ಹೇಂಗೆ ಬಂದದೆ ಎಲ್ಲಾ  ಹೇಳ್ದೆ. ನೀ ಅಲ್ಲಿಗೆ ಹೋಗಿ ಬಾ ಅಂತ. ಒಂದ್ ದಿನ ಭಾಮ್ಮೈದ ಬುದ್ಧಿ ಹೇಳ್ತ್. ಕುಂಞಣ್ಣ ಹೈದಂಗೆ ಸರಿಯೆನ್ನಿತ್. ವಿಶ್ಯ ತಿಳ್ದ ದಿನನೇ ಶಿಂಬಾ ಪರ್ವತದ ದಾರಿ ಹಿಡ್ತ್. ದಾರಿಲಿ ಅಂವಂಗೆ ಒಂದ್ ದೊಡ್ಡ ಕಾಡ್ ಸಿಕ್ಕಿತ್. ಕಾಡ್ ಮಧ್ಯೆಲಿ ಒಂದು ಸಿಂಹ ಮಲ್ಕಂಡದ್ ಕಂಡತ್. ಸಿಂಹನ ನೋಡಿ ಕುಂಞಣ್ಣ ಹೈದಂಗೆ ಹೆದ್ರಿಕೆ ಆತ್. ಅಂದರೆ ಸಿಂಹ ಮಲ್ಕಂಡಲ್ಲಿಂದ ಮೇಲೆ ಎದ್ದತ್ಲೆ. ಕುಂಞಣ್ಣ ನಾ ತುಂಬಾ  ಕಷ್ಟಲಿ ಓಳೆ. ಸಹಾಯ ಮಾಡ್‌ಂತೇಳಿ ಸಿಂಹ ಬೇಡಿಕಂಡತ್. "ನಂಗೆ ಈಗ ಸಮಯ ಇಲ್ಲೆ ಶಿಂಬಾ ಪರ್ವತದ ಋಷಿನ ಹತ್ರ ಹೋಗ್ತಾ ಒಳೆ ಅಂತ ಹೇಳ್ತ್ ಕುಂಞಣ್ಣ ಶಿಂಬಾ ಪರ್ವತದ ಋಷಿನ ಹತ್ರ ಹೋಗ್ತಾ ಒಳನಾ, ಹಂಗರೆ ಅವರ ಹತ್ರ ನನ್ನ ಒಂದ್ ಕಷ್ಟಕ್ಕೆ ಪರಿಹಾರ ಕೇಳಿಯಾ? ನಂಗೆ ತುಂಬಾ ಸುಸ್ತಾದೆ, ಎದ್ದರೆ, ಕುದ್ದರೆ ಕೈಕಾಲ್ ಬಚ್ಚಿದೆ. ಈ ಕಾಯಿಲೆ ಗುಣ ಹೇಂಗೆತ ಕೇಳಿ ಬಾ" ಅಂತ ಹೇಳ್ತ್ ಸಿಂಹ ಸರಿ ಸರಿ ನಿನ್ನ ಪ್ರಶ್ನೆಗೆ ಉತ್ತರ ಕೇಳ್ನೆಂತ ಕುಂಞಣ್ಣ ಹೇಳ್ದೆ.  ಹಂಗೆ ಮುಂದೆ

ಹೋಗ್ತಾ ಹೋಕನ ಒಂದ್ ಮರ ಅವನ ತಡ್ದದೆ. ಕುಂಞಣ್ಣ ನಾನ್ ತುಂಬಾ ಕಷ್ಟಲಿ ಒಳೆ ಮಂಜ ನನ್ನ ಬೇರ್‌ಗ ಎಲ್ಲಾ ಭಾತ್‌ಕಂಡ್ ಉಟ್ಟು. ನೆಟ್ಟಂಗೆ ನಿಲ್ಲಿಕೆ ಆಗ್ತಾ ಇಲ್ಲೆ, ನಂಗೆ ಸಹಾಯ ಮಾಡ್ ಮಂಜ ಅಂತ ಹೇಳ್ತ್. ನಂಗೆ ಪುರ್ಸೊತ್ತಿಲ್ಲೆ. ಶಿಂಬಾ ಪರ್ವತದ ಋಷಿನ ಹತ್ರ ನನ್ನ ಒಂದ್ ಪ್ರಶ್ನೆ ಕೇಳ್ಕೆ ಹೋಗ್ತಾ ಒಳೆ ಅಂತ ಹೇಳ್ತ್.

ಹಂಗಾರೆ ಅವನ ಹತ್ರ ನನ್ನ ಸಮಸ್ಯೆಗೂ ಪರಿಹಾರ ಕೇಳಿಯನಾ? ಅಂತ ಹೇಳ್ತ್ ಆ ಮರ. "ಸರಿ, ಸರಿ ಕೇಳ್ನೆ ಅಂತ ಹೇಳಿ, ಮುಂದೆ ನಡ್ತ್.

ಸ್ವಲ್ಪ ದೂರ ಹೋಕನ ಒಂದ್ ತೋಟ ಸಿಕ್ಕಿದೆ. ಅಲ್ಲಿ ಒಬ್ಬ ಮಂಸ ಕೆಲ್ಸ ಮಾಡ್ತಿತ್ತ್. ಕುಂಞಣ್ಣ ನಂಗೆ ಗೊಬ್ಬರ ಹಾಕಿಕೆ ಸಹಾಯ ಮಾಡ್ ಅಂತ ಅಂವ ಕೇಳ್ತ್. ನಾನ್ ತುಂಬಾ ದೂರ ಹೋಗ್ತಾ ಒಳೆ ನನ್ನ ಒಂದು ಪ್ರಶ್ನೆಗೆ ಉತ್ತರ ಕೇಳಿಕೆ ಋಷಿನ ಹತ್ರ ಹೋಗ್ತಾ ಒಳೆ ಅಂತ ಹೇಳ್ತ್ ಕುಂಞಣ್ಣ. ಹಂಗಾರೆ ನನ್ನ ಒಂದು ಪ್ರಶ್ನೆಗೆ ಉತ್ತರ ಕೇಳಿಕಂಡ್ ಬಾ. ನನ್ನ ತೋಟಲಿ ಎಷ್ಟ್ ಕೆಲ್ಸ ಮಾಡ್ರು ಫಲ ಸಿಗ್ತಿಲ್ಲೆ ಏನ್ ಮಾಡ್ರು ಬೆಳೆ ಸರಿ ಬೆಳಿತ್ತಿಲ್ಲೆ. ನಾನ್ ನನ್ನ ಮನೆಯವೆಲ್ಲಾ ಉಪವಾಸಂದ ಕಾಲಕಳಿತ್ತೋಳೊ. ನನ್ನ ತೋಟ ಸರಿಯಾಕೆ ಏನ್ ಮಾಡಕುತ ಕೇಳಿಕಂಡ್ ಬಾ ಅಂತ ಹೇಳ್ತ್ ಆ ಮಂಸ. ಸರಿ ನಾ ಕೇಳ್ನೆ ಅಂತ ಹೇಳ್ತ್. ಅಂವ ಹಂಗೆ ನಡ್ದ್, ನಡ್ದ್ ಸುಸ್ತಾಗಿತ್ತ್. ಈ ಹೈದ ಹಿಂಬೊತ್ತು ಪರ್ವತದ ಮೇಲೆ ತಲ್ಪಿತ್. ಈ ಪರ್ವತ ದೊಡ್ಡದಾಗಿತ್ತ್ ಈ ಪರ್ವತ ಹತ್ತಿಕೆ ಸಾಮಾನ್ಯದವುಕೆ ಆಕಿಲ್ಲೆ. ಈ ಹೈದನ ಹತ್ರ ಸಾಹಸಕೆ ಏನ್ ಕಮ್ಮಿ ಇತ್ಲೆ. ಹಿಡ್ದ ಕೆಲ್ಸ ಮಾಡಿಯೇ ತೀರಕ್ಕಿತ್ತ್. ಅಂವ ಕಷ್ಟಪಟ್ಟ್ ಪರ್ವತ ಹತ್ತಿ ಮೇಲೆ ಹೋತ್. ಅಲ್ಲಿ ಒಬ್ಬ ಋಷಿ ತಪಸ್ಸ್‌ಗೆ ಕುದ್ದದ್ ಕಂಡತ್. ಋಷಿ ಸ್ವಾಗತ ಮಾಡ್ತ್. ಇಷ್ಟ್ ದೂರ ಯಾಕೆ ಬಂದೊಳ ಮಂಜ? ಏನಾಕು ನಿಂಗೆ? ಅಂತೆಲ್ಲಾ ಋಷಿ ವಿಚಾರ್ಸಿತ್. " ಸ್ವಾಮಿಜಿ ನಾ ಕಷ್ಟಲಿ ಒಳೆ ನಾ ಅದೃಷ್ಟವಂತಂತೆಲ್ಲಾ ಹೇಳುವೆ. ಅಂದರೆ ನನ್ನ ಹತ್ರ ಅದೃಷ್ಟ ಬಾದೇ ಇಲ್ಲೆ. ಅದ್ಕಾಗಿ ನಾನ್ ಕಾದ್ ಕಾದ್ ಬೇಜಾರಾತ್. ನಂಗೆ ಅದೃಷ್ಟ ಹೆಂಗೆ ಸಿಕ್ಕಿದೆಂತ ಹೇಳಿಕೊಡಿ. ಅಂತೆಲ್ಲ ಬೇಡಿಕಂಡ್ತ್ ಕುಂಞಣ್ಣ. ಅದೃಷ್ಟ ತೇಳ್ದು ಎಲ್ರ ಹತ್ರನೂ ಬಂದದೆ. ಅದ್ ಬಾಕನ ಎಚ್ಚರಂದ ಇದ್ದ್ ಅದರ್ನ ಋಷಿಂದ ತಕಣಿಕೆ ಎಚ್ಚರಂದ ಇರೊಕು. ನಿನ್ನ ಹತ್ರನು ಅದೃಷ್ಟ ಬಂದದೆ ಅಂತ ಋಷಿ ಹೇಳ್ತ್." ಅದ್ ಮಾರ್ ವೇಷಲಿ ಬಂದದೆನಾ? ಅಂತ ಕುಂಞಣ್ಣ ಕೇಳ್ತ್. ಕೆಲವೊಮ್ಮೆ ನಿಜ ವೇಷಲಿ ಬಂದೆ ನೀ ಎಚ್ಚರಂದ ಇದ್ದರೆ ಅದ್ ನಿಂಗೆ ಖಂಡಿತ ಸಿಕ್ಕಿದೆ. ನಿಜ ಹೇಳುಕುತ ಹೇಳ್ರೆ ನೀ ಎಲ್ಲರಿಗಿಂತಲೂ ಅದೃಷ್ಟವಂತ ಅಂದರೆ ಅದೃಷ್ಟ ಬಾಕನ ನೀ ಎಚ್ಚರಂದ ಇರ್ದುಲೆ ಅಂತ ಋಷಿ ಹೇಳ್ತ್. ಇಲ್ಲೆ ಸ್ವಾಮಿಜಿ ನಾ ಇನ್ನ್ ಎಚ್ಚರಂದ ಇದ್ದನೆ. ಅದೃಷ್ಟ ಬಾಕನ 2 ಕೈಂದ ಹಿಡ್ಕಂಡನೆಂತ ಕುಂಞಣ್ಣ ಹೈದ ಗಟ್ಟಿಯಾಗಿ ಹೇಳ್ತ್ .ಅಷ್ಟೊತ್ತಿಗೆ ಅವಂಗೆ ದಾರಿಲಿ ಸಿಕ್ಕಿದವರೆಲ್ಲ ನೆನ್ಪುಗೆ ಬಾತ್ ಋಷಿಗೆ ನಮಸ್ಕಾರ ಮಾಡಿ ಪರ್ವತ ಇಳ್ದ್ ಮನೆ ದಾರಿ ಹಿಡ್ತ್. ದಾರಿಲಿ ಅವಂಗೆ ರೈತ ಸಿಕ್ಕಿತ್. ಕುಂಞಣ್ಣ ಋಷಿ ಸಿಕಿತ? ನನ್ನ ಪ್ರಶ್ನೆಗೆ ಉತ್ತರ ಸಿಕ್ಕಿತಂತ ವಿಚಾರ್ಸಿತ್.

ಹೌದು ನಿನ್ನ ತೋಟಲಿ ಬೆಳೆ ಬೆಳಿಯಕೆ ಸಾಧ್ಯನೇ ಇಲ್ಲೆ ಗಡ. ನೆಲಲಿ ರತ್ನಗ, ವಜ್ರಗ ಉಟ್ಟು ಗಡ. ನೀ ಅದರ ಮಣ್ಣ್‌ಂದ ತೆಗ್ದ್ ಮಾರಿ ಶ್ರೀಮಂತ

ಆದಿಯ ಅಂತ ಖುಷಿ ಹೇಳ್ತ್. ಕಲ್ಲ್‌ನ ಮಾರಿ ದುಡ್ಡು ಮಾಡ್? ನಂಗೆ ಈಗ ತುಂಬಾ ವಯಸ್ಸಾತ್. ನನ್ನ ಹೆಣ್ಣ್‌ಗೂ ಆದ್ಲೆ ಮಕ್ಕನೂ ಇಲ್ಲೆ. ನೀನೇ ಇಲ್ಲಿ ಇರ್ ಕುಂಞಣ್ಣ. ಈ ಕಲ್ಲ್‌ನೆಲ್ಲಾ ತೆಗ್ದ್ ಸಂತೆಲಿ ಮಾರಿ ಬಂದ ಹಣಂದ ನಿಂಗೆ ಅರ್ಧ ಇರ್ಲಿ ನನ್ನ ಆಸ್ತಿ ಎಲ್ಲಾ ನಿಂಗೇ ಆತ್‌ಂತ ಹೇಳ್ತ್ ಆ ರೈತ. ಛೇ, ಛೇ ನಂಗೆ ಇದೆಲ್ಲಾ ಆಕಿಲೆ ಅದೃಷ್ಟ ನನ್ನ ಹುಡ್ಕ್ಯಂಡ್ ಬಂದದೆಂತ ಖುಷಿ ಹೇಳಿಟು. ಆದ್ ಬಾಕೆ ಮೊದ್ಲ್ ನಾನ್ ಮನೆಗೆ ಹೋಗಿ ಕಾದ್ ನಿಲ್ಲೊಕು ಅಂತ ಹೇಳಿ ಒಂದು ಗಳ್ಗೆನೂ ಅಲ್ಲಿ ನಿಲ್ಲದೆ ಹೊರ್ಟತ್.

ದಾರಿಲಿ ಅಂವಂಗೆ ಒಂದ್ ಮರ ಸಿಕ್ಕಿತ್. ಕುಂಞಣ್ಣ ನನ್ನ ಪ್ರಶ್ನೆಗೆ ಉತ್ತರ ತಂದೊಳ್ನ? ಅಂತ ಕೇಳ್ತ್. ಹೌದು ನಿನ್ನ ಬೇರ್ ಕೆಳಗೆ ಒಂದು ತಾಮ್ರದ ಪಾತ್ರೆ ಉಟ್ಟುಗಡ ಅದನ್ನ ಬಹದ್ದೂರ್ ರಾಜಕುಮಾರ ಯುದ್ದ ಮಾಡಿಕೆ ಹೋಕೆ ಮುಂಚೆ ನಿನ್ನ ಕೆಳಗೆ ಆ ಪಾತ್ರೆನ ಹೂತು ಹಾಕುಟ್ಟು ಅದ್ರಂದ ನಿನ್ನ ಭೇರ್‌ಗೆ ನೆಟ್ಟಂಗೆ ನಿಲ್ಲಿಕೆ ಆಕಿಲ್ಲೆ. ಅದನ್ನ ತೆಗ್ದರೆ ನಿನ್ ಮೈ ಕೈ ಬೇನೆ ಮಾಯ ಆದೆತ ಖುಷಿ ಹೇಳ್ತ್. ಹಂಗರೆ ನೀ ಆ ಪಾತ್ರೆನ ತೆಗಿ, ಅದನ್ನ ನೀನೆ ಇಟ್ಕಂತ ಮರ ಈ ಹೈದಂಗೆ ಹೇಳ್ತ್.

ಇದೆಲ್ಲಾ ನನ್ನ ಕೈಲಿ ಆಕಿಲ್ಲೇ ನನ್ನ ಅದೃಷ್ಟ ಹುಡ್ಕ್ಯಂಡ ಬಂದದೆ ಅಂತ ಖುಷಿ ಹೇಳಿಟ್ಟು, ಅದ್ ಬಾಕನ ತಯಾರಿರೊಕು ಅಂತ ಹೇಳಿ ಈ ಹೈದ ಜೋರಾಗಿ ಅಲ್ಲಿಂದ ಹೊರ್ಟತ್ತ್. ಮುಂದೆ ಹೋಕನ ದೊಡ್ಡ ಕಾಡ್ ಸಿಕ್ಕಿತ್. ಅಲ್ಲಿ ಹೋಕನ ಸಿಕ್ಕಿದ ಸಿಂಹ ಮೇಲೆ ಕೆಳಗೆ ಮಾಡ್ತ್. ಒಂದೇ ಸವನೇ ಇವನನೇ ನೋಡ್ತಾ ಇತ್. ಕುಂಞಣ್ಣ ನನ್ನ ಪ್ರಶ್ನೆಗೆ ಉತ್ತರ ಸಿಕ್ಕಿತಾ? ಎಂತ ಹೇಳ್ತ್. ಹೌದ್ ಸಿಕ್ಕಿತ್. ನಿನ್ನ ಹೊಟ್ಟೆಗೆ ಹಿಂಗೆ ತಿನಿ ಇಲ್ಲದೆ ಹೀಂಗೆ ಒಳಗಡತ ಖುಷಿ ಹೇಳ್ತ್.. ಇಲ್ಲಿಗೆ ಬಂದ ಮೊದ್ಲ ಪೆದ್ದನ ನೀ ತಿನ್ನಕು ಆಗ ಎಲ್ಲ ಸರಿ ಆದೆತ ಹೇಳ್ತ್."ಮೊದ್ಲ ಪೆದ್ದನಾ?" ಸಿಂಹ ಯೋಚ್ನೆ ಮಾಡ್ತ್ ಹಿಂದೆ ಮುಂದೆ ಯೋಚ್ನೆ ಮಾಡದೆ ಕುಂಞಣ್ಣ ಮೇಲೆ ಹಾರ್ತ್. ಈ ಹೈದ ಜೀವದ ಹೆದ್ರಿಕೆಲಿ ಕಿರ್ಚಿಕಂಡ್ ದೂರ ಓಡ್ತ್. ಕುಂಞಣ್ಣನ ಕಾಲ್‌ಗೆ ಕಲ್ಲ್ ತಾಗಿ ಕುಂಞಣ್ಣ ಅಲ್ಲೇ ಬಿತ್ತ್. ಇವನ ಕಿರ್‌ಚುವ ಸದ್ದ್‌ಂದ ಅಲ್ಲಿ ಕಾಡ್‌ಲಿ ಸೌದೆ ಮಾಡುವಂವ ಬಂದ್ ಸಿಂಹದ ತಲೆಗೆ ಕತ್ತಿಲಿ ಕಡ್ತ್. ಅದ್ ಬ್ಯಾನೆಂದ ಓಡಿ ಹೋತ್. ನಿನ್ನ ಅದೃಷ್ಟ ಲಾಯಿಕಿ ಉಟ್ಟು, ನಾ ಯಾಗೋಳು ಬೇರೆ ದಾರಿಲಿ ಹೋಗಂವ. ಇಂದ್ ಈ ಕಡೆ ಬಂದದ್ ಅಪರೂಪ. ಸ್ವಲ್ಪ ಆರಾಮ ತಕಂಡ್ ಮತ್ತೆ ಹೋಗ್‌ಂತ ಇಂವ ಹೇಳಿ ಅಂವನ ಮೇಲೆ ಎತ್ತಿತ್. ಇಲ್ಲೆ ನಂಗೆ ಬೇಗ ಮನೆಗೆ ಹೋಕು. ನನ್ನ ಅದೃಷ್ಟ ಬರ್‌ತೊಟ್ಟು ಅದ್ಕಿಗ ಕಾಯಕು ನಾ. ಒಂದು ಕ್ಷಣನೂ ನಿಲ್ಲದ ಓಡಿ ಓಡಿ ಹೋತ್

ಅಂವ ಮನೆಗೆ ತಲ್‌ಪಿ ಚಿಂಟೆಲಿ ಒಬ್ಬನೇ ಕುದ್ದಿತ್, ಶಿಂಬಾ ಪರ್ವತದ ಖುಷಿ ಸಿಕ್ಕಿತಾ ಏನ್ ಹೇಳ್ತ್? ಅಂತ ಭಾಮೈದ ಕೇಳ್ತ್. ಅದೃಷ್ಟ ನನ್ನ ಹುಡ್ಕ್ಯಂಡ್ ಬಂದದೆ. ಅದ್ಕೆ ನಾ ಕಾಯಿತಾ ಕುದ್ದೊಳೆಂತ ಕುಂಞಣ್ಣ ಹೈದ ಹೇಳ್ತ್.

ಪಾಪ ಅಂವ ಈಗನೂ ಕಾಯಿತಾ ಉಟ್ಟುಗಡ। ಹಂಗರೇ ಖುಷಿ ಹೇಳ್ದ ಮಾತ್ ಸತ್ಯನಾ? ಸುಳ್ಳು? ಹೇಗೂ ಉಟ್ಟಾ! ನೀವುಗಲೇ ಉತ್ತರ ತಿಳ್ದ್ ಅಂವಂಗೆ ಹೇಳಿ.

# ಈ ಇಬ್ಬರ್

- ವಿದ್ವಾನ್ ಟಿ.ಜಿ ಮುಡೂರು

ಈ ಇಬ್ಬರ್–ಇವರಿಬ್ಬರ್
ಇಂದಿಗೆ–ಇಲ್ಲಿಗೆ
ಇದ್ದ್‌ೀ ಇರದವು–ಇಲ್ಲದೆನೆ ಇರುವವು
ಈ ಇವರಿಬ್ಬರ್–ಈ ನಮ್ಮಿಬ್ಬರ್
ಇಲ್ಲಿಗೆ–ಇಂದಿಗೆ
ಇಲ್ಲದೆನೆ ಇರುವವು–ಇದ್ದ್‌ೀ ಇರದವು
ಇತ್ತ–ನಮ್ಮ ಪಾರೋತಿ ಮಂಜ–ಮಣ್ಣಿನ ಹೈದ ಗಣಪ
ಅಂಕ ಡೊಂಕ ಸಂಕಪಾಲ–ಮೂರು ತಲೆ ಹತ್ತ್ ಕಾಲ
ಕಾಲೆಳೆದೆಳೆದ್–ವ್ಯಾಸ ಪರಿಧಿನ ಸುತ್ತ
ಗೀರ್‌ಳೆದ್ ನಡು ಹಗಲೆಲ್ಲ–ಕೆಸರ ಗದ್ದೆಲೀ ಉಳ್‌ದ
ಅತ್ತ–ನಮ್ಮ ಆಚಾರ್ಯರ ಮಾಣಿ–ಒಪ್ಪಕುಂಞಿ ಅಶ್ವತ್ಥಾಮ
ಒಮ್ಮನೇ ಊರುಬುಟ್ಟ್–ರಾಜಧಾನಿಗೆ ಧೀಂಕಿಟ್ಟ್
ಡೇರೆಂದ ಡೇರೆಗೆ ತೆರೆಕುಣಿದ್–ನಡ್ ಇರುಳೆಲ್ಲ
ಬಿಟ್ಟ ಮಂಡೆಲಿ ಚಿರಂಜೀವಿಯಾಗೀ ಅಲೆದ
ಇಂತ್–ಈ ನಮ್ಮಿಬ್ಬರ್ ಈ ಇವರಿಬ್ಬರ್
ಇಂದಿಗೆ–ಇಲ್ಲಿಗೆ
ಇಲ್ಲದೆನೂ ಇರುವವು–ಇದ್ದ್‌ೀ ಇರದವು
ಇಲ್ಲಿಗೆ–ಇಂದಿಗೆ
ಈ ಇಬ್ಬರ್–ಇವರಿಬ್ಬರ್

# ಕನಸ್

ಶತಶತಮಾನಗಳ ಅಳೆದಳೆದ್
ಇನ್ನೂ ಉಳ್‌ದ ಈ ಆಲ ಬೇತಾಳ
ನೆಲಬಾನಲಿ ಕೊಂಬೆ ರೆಂಬೆನ ಹರಡಿ
ಇಳಿಬುಟ್ಟ ಹಳೆ ಜೆಡೆ ಬೇರುಗಳ ಜತೆ ಸಿಡಿದ
ಕಿರು ಬೀಜಕೆ ಮಟನೆಗೆದ್ ಚಿಗುರಿ ಬೆಳೆವ ಆಸೆ
ಮೊಳೆತ್ ಸಸಿ ಆವ–ಬೆಳೆದ್ ಮರ ಆವ
ಕೊಂಬೆ ರೆಂಬೆಲಿ ಹಚ್ಚ ಹೊಸತನ ತುಂಬಿ
ತಲೆ ಎತ್ತಿನಿಂತ್ ನಗಿಕೆ ಆಸೆ
ಕರೆಗಾಳಿಗೆ ಕಿವಿ ತುಂಬಿ ತಲೆತೂಂಗಿಕಾಸೆ
ಕಾಲ ಕಾಲಕೆ ಕಾಯಿ ಹೂ ಹಣ್ಣ್‌ಗಳ ಹೊತ್ತ್
ಮರಳಿ ಮಣ್ಣಲಿ ಮತ್ತೆ ಮರವಾಗಿಕಾಸೆ
ಮರಿಗಿಳಿ ಮರಿಗಿಳಿ ಮಲಗಿಲ್ಲಿ......
ಮರದಲಿ ತೂಗುವ ಗೂಡಲ್ಲಿ.......
ಹಾಡಿಗೆ ಈ ಆಲ ಬೇತಾಳ ಪಂಜರದ
ಅರಗಿಳಿಗೆ ಹಗಲೆಲ್ಲ ಕನಸ್

# ಸಂಬ್ಳದವ್ರ ಹಾಡ್

– ಕುತ್ಯಾಳ ನಾಗಪ್ಪ ಗೌಡ (ಕಿರಣ)

ತಿಂಗಳ್ ಹೋಗಿ ಸಂಬಳ ಬಾತ್
ಹರ್ಷದ ಜತೆಗೂಡಿ.
ಕಾದ್ ನಿತ್ತುಟು ಬಿಲ್ಲಿನ ಸಾಲ್
ಜೇಬಿಗೆ ಮುಖ ಮಾಡಿ!
ನೀರಿನ ಬಿಲ್ಲ್, ಹಾಲಿನ ಬಿಲ್ಲ್,
ಮದ್ದಿನ ಬಿಲ್ಲ್, ಫೋನಿನ ಬಿಲ್ಲ್,
ಸಾಲೆಯ ಫೀಸ್, ಗ್ಯಾಸಿನ ಬಿಲ್ಲ್,
ಸಾಲದ ಕಂತ್, ಅಸಲಿನ ಬಡ್ಡಿ,
ಪೇಪರ್ ಬಿಲ್ಲ್, ಕೇಬ್‌ಲ್ ಬಿಲ್ಲ್,
ತಿಂಗಳ ರೆಂಟ್, ಕರೆಂಟ್ ಬಿಲ್ಲ್,
ನೋಡಿ ನೋಡಿ ಪಾವತಿ ಮಾಡಿ;
ದಿನಸಿ ಅಂಗ್ಡಿ ಲೆಕ್ಕ ಹಾಕಿ;
ತಿಂಗ್ಳಿಗೊಮ್ಮೆ ಗುಂಡಿನ ಶೋಕಿ,
ಹಿಂದಿನ ಸಾಲ ಅಲ್ಲಿಯೆ ಬಾಕಿ!
ಸಾರಿಗೆ, ಮೆಣಸ್, ಜೀರಿಗೆ, ಬೆಲ್ಲ
ಪೆಟ್ರೋಲ್, ಗ್ಯಾಸ್, ದುಬಾರು;
ಸೊಪ್ಪು, ಗೆಡ್ಡೆ, ಕಾಯಿಪಲ್ಲೆ,
ಚಿನ್ನಕೆ ಸಮಸಮ ತರ್‍ಕಾರಿ!
ಹಬ್ಬ ಬಾತ್ ಬಟ್ಟೆ ಬೇಕು
ಅಕ್ಕಿ ಹಣ್ಣ್ ಹೂವು;
ಎಣ್ಣೆ ಬೆಣ್ಣೆ ಬೇಳೆ ಸಕ್ರೆ
ಅಯ್ಯೋ ಕಹಿಬೇವು
ಮಾಲ್ ಮಳಿಗೆಲಿ ಸಂತೆದಾರಿಲಿ
ಬೆಲೆ ಹೋರಿಯ ಗುಟುರು!
ದಾಳಿಗೆ ಹೆದ್ರಿದ ಜನಗಳ ಮೋರೆಲಿ
ಹರ್‍ದದೆ ಹನಿ ಹನಿ ಬೆವರು!
ಡಾಲರ್– ಆನೆ ನಡ್ದದೆ ಹಾದಿ,
ಹೆಂಗೇ ಇರಲಿ ಕಾಡ್;
ಹೆದ್ರಿ ನಡ್ದದೆ ಕಾಡಿನ ನಡುಲಿ
ಊರಿನ ರುಪಾಯಿ, ಆಡ್!

* * * * *

# ಉದ್ಧಾರ

– ಕುತ್ಯಾಳ ನಾಗಪ್ಪ ಗೌಡ (ಕಿರಣ)

ದೊಡ್ಡವರ ಒಕ್ಕಲಾಗಿ ತುಂಬಾ ಕಾಲ ಬೇಸಾಯ ಮಾಡ್ದೆ;
ಬೆಟ್ಟುಗದ್ದೆ, ಬೆಳೆಕಮ್ಮಿ, ಗೇಣಿ ಜಾಸ್ತಿ, ದುಡ್ಡ್ ಸೋತುಹೋದೆ.
ವೊರ್ಸ ವೊರ್ಸ ಸಾಲ ಸೋಲ ನಷ್ಟ ಕಷ್ಟ– ಕಂಗಾಲಾದೆ.

ಗೇಣಿ ಕಮ್ಮಿ ಮಾಡೋಕು, ಕೊಳಕೆಗದ್ದೆ ಕೊಡ್ಲಿ ಉದ್ಧಾರ ಮಾಡೋಕು
ಹೀಂಗಂತ ಅರ್ಜಿ ಬರ್ಸ್ಲಿ ಕೈಲಿ ಹಿಡ್ಕಂಡೇ ದೊಡ್ಡವಿದ್ದಲ್ಲಿಗೆ ನಡ್ದೆ.
ನಾ ಹೋಕಾಕನ ದೊಡ್ಡೊವು ಅಲ್ಲಿ ಇತ್ತ್‌ಲ್ಲೆ.
ಹಳೆ ವ್ಯಾಜ್ಯಗಳ ವ್ಯವಹರಿಸಿಕೆ ಇತ್ತ ಬಂದೊಳಾಂತ ಸುದ್ದಿ ಸಿಕ್ಕಿತ್.
ದೊಡ್ಡ ಸುದ್ದಿನ ತಿಳ್ಕಂಡ್ ಹೋದ ದಾರಿಲೇ ವಾಪಾಸ್ ಬಂದೆ.

ಊರು ಕೇರಿ ಪೇಟೆ ತೋಟ ಆಟ ಕೂಟ ಅಂಕ ಆಯನು ಹುಡ್ಕಾಡ್ದೆ
ಒಂದು ಕಡೆ ಕಳ್ಳರ, ಕೊಲೆಗಾರರ ದರ್ಪದಹಂಕಾರದ ಮಾತ್ ಕೇಳಿಬಾತ್
ನಾ ಹುಡ್ಕ್‌ತಿದ್ದ ದೊಡ್ಡೊವು ಅಲ್ಲಿದ್ದೊ. ಅವ್ಕೆ ನನ್ನ ಗುರ್ತ್ ಸಿಕ್ಕಿತ್.

'ನಿನ್ನ ಕೆಲ್ಸ ಆದ್ಹಾಂಗೆ' ಅಂತ ಕರ್ದ್ ಹೇಳ್ತಿದ್ಹಂಗೆ ಅವು ತೀರ್‍ಕೊಂಡೊ!
ಉದ್ಧಾರ ಮಾಡಿಕೇಂತ ಹುಟ್ಟಿದಂವ ಒಬ್ಬ ತೀರಿಹೋತ್;
ಇನ್ನೊಬ್ಬ ಹುಟ್ಟಿ ಬರೋಕಷ್ಟೆ ಹೀಂಗಂತ ಯಾರೊ ಹೇಳ್ದಾಂಗಾತ್.

(ಆಧಾರ: 17ನೆಯ ಶತಮಾನದ ಆಂಗ್ಲ ಕವಿ
ಜಾರ್ಜ್ ಹರ್ಬರ್ಟನ ರಿಡೆಂಪ್ಶನ್ ಕವಿತೆ)

* * * * *

# ಇಡೀ ದಿನ ಮನೆಲಿ

– ಲೀಲಾ ದಾಮೋದರ

ಅಯ್ಯೋ ಇವು ಬಾವ ಹೊತ್ತಾತ್
ಈ ಮಂಜನೋ ತಿಂಡಿ ತಿಂದ್ ಆಟ ಆಡಿಕೆ ಓಡ್ತ್
ಚೀಲ ಎಸೆದ ರಭಸಕ್ಕೆ ಹೊರಚೆಲ್ಲಿದ ಪುಸ್ತಕಗ
ಬೂಟ್ಸು ಒಂದು ಅಲ್ಲಿ, ಇನ್ನೊಂದು ಎಲ್ಲಿಯೋ!
ನೀರ್‌ನ ಕುಪ್ಪಿ ತಲೆ ಕೆಳಗಾಗಿ ಸೋರ್ದ ನೀರ್
ನೊಣ್ಣನೆ ನೆಲದ ಮೇಲೆ ಫಳ ಫಳ ಹೊಳ್ದದೆ
ಮರ್ಪ್ ಮರ್ಪ್ ಕೂಸು ಈಗ ತಾನೇ ಮಲ್ಗಿಟು
ಕೊಂಡಾಟ ಮಾಡಿ ಜೋಗುಳ ಹಾಡಿ ಮನ್ಸ್‌ಗೆ ತೃಪ್ತಿ ಆದರೂ
ತೊಟಗಿಲು ಒಚ್ಚಿ ಒಚ್ಚಿ ಕೈಗ ಸೋತೊಳೊ
ಕೂಸು ಆಟ ಆಡ್ದ ಆಟದ ಸಾಮಾನ್‌ಗ ಎಲ್ಲ ಅಲ್ಲೆಲ್ಲೋ ಬಿದ್ದೊಳೊ
ಎಲ್ಲ ತೆಗ್ದ್ ಜೋಡ್ಸಿ ಇಸೊಕು
ಇಲ್ಲರೆ ಅವುಕೆ ಸಿಟ್ಟು ಬಂದದೆ.
ರಾತ್ರಿಗೆ ಅಡ್ಗೆ ಆಕು ಬಿಸಿ ಬಿಸಿ
ದುಡ್ದ್ ಬಂದವೆ ಒಳ್ಳೆ ಊಟ ಉಪಚಾರ ಬೇಕಲೆ
ಇಸ್ತ್ರಿ ಮಾಡಿಕೆ ಬಟ್ಟೆನ ರಾಶಿಯೇ ಉಟ್ಟು
ಆಫೀಸ್‌ಗೆ ಹೋಕನ ನೀಟಾಗಿ ಇರೊಕು ಅಲ್ಲಿ!
ಅಯ್ಯೋ ಇದೇನ್! ಹಿಂಗೆ ಆಲೋಚನೆ ಮಾಡ್ರೆ
ಕೆಲ್ಸ ಮುಗಿದು ಯಾಗ?
ಕೂಸು ಎದ್ದ್ ಮರ್ಡಿಕೆ ಮುಂದೆ
ಹೈದ ಆಟ ಆಡಿ ಹೊರ್ದಿಕೆ ಮುಂದೆ
ಗಂಡ ಕಚೇರಿಂದ ಬಂದ್ ಕೆರ್‌ಳಿಕೆ ಮುಂದೆ
ಆದಷ್ಟ್ ಕೆಲಸ ಮುಗ್ಸೊಕು
ಇಲ್ಲರೆ ಸುಮ್ಮನೆ ಗೊಣ್ಗಾಟ, ಇರ್ಸು ಮುರ್ಸು
ಇಡೀ ದಿನ ಮನೆಲೇ ಇದ್ದಿಯ
ಮನೆ ಮನಾರ ಇಸಿಕೆ ಏನ್?
ಇಡೀ ದಿನ ಮನೆಲೇ ಇದ್ದಿಯ
ಇಸ್ತ್ರಿ ಮಾಡಿಕೆ ಆಗದ?
ರುಚಿ ರುಚಿ ಆಗಿ ಅಡ್ಗೆ ಮಾಡಿಕೆ ಏನ್?
ಶಾಲೆ ಹೈದನ ಹೋಂವರ್ಕ್ ಮಾಡ್ಸಿಕೆ ಏನ್?
ನೆಟ್ಟಿಕಾಯಿ ತಾಕೆ ಏನ್? ವಿದ್ಯುತ್ ಬಿಲ್ಲು ಕಟ್ಟಿಕೆ ಏನ್?

* * * * *

ಹೌದಲೆ! ನಂಗೂ ಮನ್ಸುಟ್ಟು ಇದೆಲ್ಲ ಮಾಡೊಕುತ
ಆದರೆ ದಿನಕ್ಕೆ ಇಪ್ಪತ್ತನಾಲ್ಕೇ ಗಂಟೆಗ! ಏನ್ ಮಾಡ್ಲಿ?

ಅಯ್ಯೋ! ಇದೇನಪ್ಪಾ ಅಲೋಚನೆಲೇ ಹೊತ್ತು ಜಾರಿಕಂಡ್ ಉಟ್ಟು
ಕೆಲ್ಸನೇ ಸಾಗುದುಲೆ, ಇನ್ನೇನ್ ಇವು ಬಂದುಬುಟ್ಟವೆ
ಓ! ಕರೆಗಂಟೆ ಸದ್ದ್! ಬಂದೇ ಬುಟ್ರೊ!!
ಓಡಿ ಹೋಗಿ ಬಾಗ್ಲ್ ತೆಗ್ದನೆ
ಹಾಂಗೆ ಸರಕ್ಕನೆ ತಿರ್ಗಿ ಗೊಂಬೆ ಎತ್ತಿ ಇಸಿನೆ
ಚೀಲದೊಳಗೆ ಪುಸ್ತಕ ತುರ್ಕಿನೆ
ಚಂಡಿ ನೆಲನ ಒರ್ಸಿನೆ
ಕೂಸು ಬೇಗ ಮಲ್ಗಿತ್ತೀಲೆ
ಸಮಜಾಯಿಷಿ ಕೊಟ್ಟನೆ
ಈ ಹೈದನೋ ಎಷ್ಟ್ ಹೇಳ್ರೂ ಕೇಳ್ದೀಲೆ
ಇರಿ ಬೇಗ ಬೇಗ ತೆಗ್ದ್ ಬುಟ್ಟನೆ
ನೀವು ಕೈಕಾಲು ತೊಳ್ಕಣಿ, ಅಷ್ಟರೊಳಗೆ ಕಾಫಿ ಮಾಡ್ನೆ

ಇದ್ಯಾಕೆ ಹೀಂಗೆ ಗಡಿಬಿಡಿ ಮಾಡಿಯ?
ಮಕ್ಕ ಇರುವ ಮನೆ ಅಲ್ಲ?
ಅದ್ ಹೀಂಗೆ ಇದ್ದರೇ ಲಾಯ್ಕ್ ಕಣೆ
ಇಡೀ ದಿನ ಎತ್ತ್ ಇಸ್, ತೊಳಿ ಬೊಳಿ
ನಿಂಗೂ ವಿಶ್ರಾಂತಿ ಬೇಡನಾ?
ನೋಡು ಇದೆಲ್ಲ ನಾ ಎತ್ತಿ ಇಸಿನೆ
ನೀ ಹೋಗಿ ಕಾಫಿ ಮಾಡ್.

ಆಹಾ! ಮನ್ಸ್ ತುಂಬಿ ಬಂದದೆ
ಪ್ರೀತಿಂದ ದಿಟ್ಟಿಸಿನೆ
ದಿಟ್ಟಿಗೆ ದಿಟ್ಟಿ ಕೂಡಿಕೆ ಎಲ್ಲಿ ಒಳೊ ಕಣ್ಣುಗ?
ಸುತ್ತೊಳೂ ಹುಡ್ಕಿನೆ, ಕಾಂಬೊದುಲೆ
ಆಗಳೇ ಕರೆಗಂಟೆನ ಕರ್ಕಶ ಸದ್ದ್!
ಏನ್ ಇದ್! ಅರೆಗಂಟೆನ ಜೊಂಪು
ನನ್ನ ಸುಖದ ಸುಪ್ತಿಗೆಲಿ ತೂಗಿತಾ?
ಗಡಿಬಿಡಿಲಿ ಹೋಗಿ ಬಾಗ್ಲ್ ತೆಗ್ದನೆ
"ಏನ್‌ನೇ ಇದ್..........................
ಇಡೀ ದಿನ ಮನೆಲೇ ಇದ್ದಿಯ......."
ಅಲ್ಲ ಮತ್ತೆ......!!

* * * * *

# ಎಲ್ಲಿಗೆ ಹೋಗುಟು ನಾಗು ಎಲ್ಲಿಗೆ ಹೋಗುಟು?

– ಜಯಮ್ಮ ಚೆಟ್ಟಿಮಾಡ, ಸುಳ್ಯ

ಎಲ್ಲಿಗೆ ಹೋಗುಟು ನಾಗು ಎಲ್ಲಿಗೆ ಹೋಗುಟು?
ಬೊಳ್ಪುಗೆ ಹೋದ ಗೂಡೆ ಯಾಕೆ ಇನ್ನ್ ಸಾ ಬಾತ್‌ಲ್ಲೆ
ಎಲ್ಲಿಗೆ ಹೋಗುಟು? ಎಲ್ಲಿಗೆ ಹೋಗುಟು?
ಕೆಲ್ಸಕೆ ಹೋದ ಗೂಡೆ ಯಾಕೆ ಇನ್ನ್ ಸಾ ಬಾತ್‌ಲ್ಲೆ?

ಗುಳಿ ಕೆನ್ನೆ ನೆಗೆನೋ, ಅದರ ಕೊಣ್ತದ ನಡಿಗೆನೋ
ಕೊಣ್ತದ ನಡಿಗೆನೋ, ಅದರ ಕುಲ್ಕುವ ಜೆಡೆನೋ
ಕೆಲ್ಸಕೆ ಹೋದ ಗೂಡೆ ಯಾಕೆ ಇನ್ನ್ ಸಾ ಬಾತ್‌ಲ್ಲೆ?

ಜಕ್ಕಟೆ ಜವ್ವಂತಿ ಅದ್ ಕೆಲ್ಸಲಿ ಬಿರ್ಸೆತಿ
ಕೆಲ್ಸಲಿ ಬಿರ್ಸೆತಿ ಅದ್ ನಲ್ವತ್ರ ಪೆದ್ದೊಳ್ತಿ!
ಕೆಲ್ಸಕೆ ಹೋದ ಗೂಡೆ ಯಾಕೆ ಇನ್ನ್ ಸಾ ಬಾತ್‌ಲ್ಲೆ?

ಕುಜಿಲಿಲಿ ಅಕ್ಕಿಲ್ಲೆ, ನಮ್ಮ ಒಲೇಲಿ ಕಿಚ್ಚಿಲ್ಲೆ
ಒಲೇಲಿ ಕಿಚ್ಚಿಲ್ಲೆ ಇಂದ್ ಗಂಜಿನೆ ಮಾಡ್ತ್‌ಲ್ಲೆ
ಕೆಲ್ಸಕೆ ಹೋದ ಗೂಡೆ ಯಾಕೆ ಇನ್ನ್ ಸಾ ಬಾತ್‌ಲ್ಲೆ? ಯಾಕೆ ಬಾತ್‌ಲ್ಲೆ?

ಕರ್ರುಗ್ಗಡೆ ಕತ್ತಾಲೆ, ಇಲ್ಲಿ ಮಿಣ್ಕುಳನೂ ಇಲ್ಲೆ
ಮಿಣ್ಕುಳನೂ ಇಲ್ಲೆ, ಹೊತ್ತು ನಡಿರ್ಲ್ಲೇ
ಎಲ್ಲಿಗೆ ಹೋಗುಟು ಗೂಡೆ ಇನ್ನ್ ಸಾ ಯಾಕೆ ಬಾತ್‌ಲ್ಲೆ? ಯಾಕೆ ಬಾತ್‌ಲ್ಲೆ?

ದಾರಿಲಿ ಬನ ಉಟ್ಟು, ಅದರ ಹಕ್ಕಲೆ ಕಾಡುಟ್ಟು,
ಕಾಡ್‌ಲಿ ಹುಲಿ ಉಟ್ಟು, ದೂರದ ಮರಲಿ ಗಿಡಿ ಉಟ್ಟು
ಎಲ್ಲಿಗೆ ಹೋಗುಟು ಗೂಡೆ ಇನ್ನ್ ಸಾ ಯಾಕೆ ಬಾತ್‌ಲ್ಲೆ? ಯಾಕೆ ಬಾತ್‌ಲ್ಲೆ?

ಕೆರೆಲಿ ನಿಗರುಟ್ಟು, ಅಲ್ಲೆ ಹಕ್ಕಲೆ ಚೋಡುಟ್ಟು,
ಚೋಡುಲಿ ನೀರುಟ್ಟು, ಬೊಳ್ಳಕೆ ಪಾಲ ಹೋಗುಟ್ಟು,
ಎಲ್ಲಿಗೆ ಹೋಗುಟು ಗೂಡೆ ಇನ್ನ್ ಸಾ ಯಾಕೆ ಬಾತ್‌ಲ್ಲೆ? ಯಾಕೆ ಬಾತ್‌ಲ್ಲೆ?

ಭೂತದ ಚೇಷ್ಟೆನೋ ಅಲ್ಲಾ ಪೀಡೆನ ಕಾಟನೋ
ಪೀಡೆನ ಕಾಟನೋ ನಮ್ಮ ಕಲ್ಲುರ್ಟಿ ಮಾಯಗನೋ
ಎಲ್ಲಿಗೆ ಹೋಗುಟು ಗೂಡೆ ಯಾಕೆ ಬಾತ್‌ಲ್ಲೆ? ಯಾಕೆ ಬಾತ್‌ಲ್ಲೆ?
ಬಲ್ಮೆಲಿ ಕೇಳ್ಲೋಕು ಮತ್ತೆ ನೇಮನ ಮಾಡ್ಲೋಕು

ಹರಕೆನ ಒಪ್ಪೋಕು, ಕೋಳಿನ ತಲೆನ ಕೊಯ್ಯೊಕು
ಎಲ್ಲಿಗೆ ಹೋಗುಟು ಗೂಡೆ ಯಾಕೆ ಇನ್ನ್ ಸಾ ಬಾತ್‌ಲ್ಲೆ? ಯಾಕೆ ಬಾತ್‌ಲ್ಲೆ?

ಇರಿಂಟಿ ಚೀರಿದೆ ದೂರಲಿ ಗೂಬೆ ಸಾ ಗೂಂರಿದೆ
ಗೂಬೆ ಸಾ ಗೂಂರಿದೆ, ಬಾನ್‌ಲಿ ಮೋಡ ಕರ್‌ಂಚಿದೆ
ಎಲ್ಲಿಗೆ ಹೋಗುಟು ಗೂಡೆ ಯಾಕೆ ಇನ್ನ್ ಸಾ ಬಾತ್‌ಲ್ಲೆ? ಯಾಕೆ ಬಾತ್‌ಲ್ಲೆ?

ಬತ್ತಕ್ಕಿ ಕೊಟ್ಟವೆ, ದನಿಗ ದುಡ್ಡು ಸಾ ಕೊಟ್ಟವೆ
ದುಡ್ಡು ಸಾ ಕೊಟ್ಟವೆ, ಉಡಿಕೆ ಸೀರೆಸಾ ಕೊಟ್ಟವೆ
ಎಲ್ಲಿಗೆ ಹೋಗುಟು ಗೂಡೆ ಯಾಕೆ ಇನ್ನ್ ಸಾ ಬಾತ್‌ಲ್ಲೆ? ಯಾಕೆ ಬಾತ್‌ಲ್ಲೆ?

ಮರ್ಲ್ನ ಹೆಣ್ಣಲ್ಲ, ಅದ್ ಮರ್ಲಾವ ಹೆಣ್ಣಲ್ಲ,
ಮರ್ಲಾವ ಹೆಣ್ಣಲ್ಲ, ಅದ್ ಮರ್ಯಾದೆನ ಹೆಣ್ಣ್
ಎಲ್ಲಿಗೆ ಹೋಗುಟು ಗೂಡೆ ಯಾಕೆ ಇನ್ನ್ ಸಾ ಬಾತ್‌ಲ್ಲೆ? ಯಾಕೆ ಬಾತ್‌ಲ್ಲೆ?

ಬಲೆಗೆ ಬಿದ್ದುಟೋ, ಮೋಸದ ಗುಂಡಿಗೆ ಬಿದ್ದತೋ
ಗುಂಡಿಗೆ ಬಿದ್ದತೋ, ಅಲ್ಲಿ ಜಗಳ ಮಾಡ್ಯುಟೋ
ಎಲ್ಲಿಗೆ ಹೋಗುಟು ಗೂಡೆ ಯಾಕೆ ಇನ್ನ್ ಸಾ ಬಾತ್‌ಲ್ಲೆ? ಯಾಕೆ ಬಾತ್‌ಲ್ಲೆ?

ಪ್ರಾಣಿಗಾದನೋ ಗಂಡ್‌ಗ ರಕ್ಕಸರಾದನೋ
ರಕ್ಕಸರಾದನೋ ಗೂಡೆನ ತಿಂದೆ ಬುಟ್ಟನೋ
ಎಲ್ಲಿಗೆ ಹೋಗುಟು ಗೂಡೆ ಯಾಕೆ ಇನ್ನ್ ಸಾ ಬಾತ್‌ಲ್ಲೆ? ಯಾಕೆ ಬಾತ್‌ಲ್ಲೆ?

ಕೂಸು ಮೊರ್ಬದೇ, ನನ್ನ ಕೈಕಾಲ್ ನಡ್ಗಿದೆ
ಕೈಕಾಲ್ ನೊಡ್ಗಿದೆ ಮೊನ್ಸ್‌ಗೆ ಕೆಟ್ಟದೆ ಕಂಡದೆ
ಎಲ್ಲಿಗೆ ಹೋಗುಟು ಗೂಡೆ ಯಾಕೆ ಇನ್ನ್ ಸಾ ಬಾತ್‌ಲ್ಲೆ? ಯಾಕೆ ಬಾತ್‌ಲ್ಲೆ?

ಹೆಣ್ಣ್ ಬೊದ್ಕ್‌ನ ಯಾರ್ ಮಣ್ಣ್ ಮಾಡ್ವನೋ
ನರ್ಕಕ್ಕೆ ಹೋಗಲಿ ಅವ್ಕೆ ಸಿಡ್ಲ್ ಹೊಡ್ಯಲಿ
ಎಲ್ಲಿಗೆ ಹೋಗುಟು ಗೂಡೆ ಯಾಕೆ ಇನ್ನ್ ಸಾ ಬಾತ್‌ಲ್ಲೆ?
ಎಲ್ಲಿಗೆ ಹೋಗುಟು?
ಯಾಕೆ ಬಾತ್‌ಲ್ಲೆ? ಯಾಕೆ ಬಾತ್‌ಲ್ಲೆ?

* * * * *

# ಬಸ್ ಪ್ರಯಾಣ

– ಎಂ.ಜಿ. ಕಾವೇರಮ್ಮ

ಬಸ್ನಲಿ ಪ್ರಯಾಣ ಮಾಡ್ದೂಂತೇಳ್ರೆ
ಜೀವಕೆ ಬಂದದೆ
ಒತ್ತಿ ಜನರ ತುಂಬಿಸಿಕನ
ಉಸ್ರುನು ಕಟ್ಟಿದೆ

ಓಡುವ ಬಸ್ನ ಪಕ್ಕನೆ ನಿತ್ತರೆ
ಮಂಡೆನು ಕುಟ್ಟಿದೆ
ಕಣ್ಣ್‌ಲಿ ಕನ್ನಡ್ಕ ಇದ್ದರೆ ಅಂತು
ದೂರಕೆ ರಟ್ಟಿದೆ

ಅತ್ತಿತ್ತ ಅಲ್ಗಿದ್ ಒಬ್ಬರ ಮೇಲೆ
ಒಬ್ಬರ್ ಬಿದ್ದವೆ
ಒಬ್ಬರ ಕಾಲ್‌ಗೆ ಒಬ್ಬತಾಂಟಿ
ಎಡ್ಗಿದ್ ಬಿದ್ದಾವೆ

ಮಕ್ಕಳ ತೆತ್ತಿಕಂಡ್ ಹೋದರೆ ಅಯ್ಯೆಕ
ಅಪ್ಪುಚ್ಚಿ ಆದವೆ
ಅಜ್ಜಪ, ಉಗ್ಗವ ಬಸ್‌ಗೆ ಹತ್ತಿಕೆ
ಬಂಜ ಪಟ್ಟಾವೆ

ಸೀಟ್‌ನು ಸಿಕ್ಕುದ್ಲೆ, ನಿಲ್ಲಿಕೆ ಆದ್ಲೆ
ಕೇಳೋವು ಯಾರಿಲ್ಲೆ
ಬೊಸ್ರಿ ಹೆಣ್ಮಕ್ಕ ಹೋದುನು ಕಷ್ಟ
ಹೋಗ್ಬೋಡಿ ದಮ್ಮಯ್ಯ
ಬಸ್‌ನ ಸಾವಾಸ ಬೇಡ ನೀವ್ಗೆ
ಮನೆಲಿರಿ ಅಕ್ಕಯ್ಯ

ಲಡ್ಕಾಸ್ ಬಸ್‌ಲಿ ಹೋದರು ಅಂತೂ
ಕೈಕಾಲ್ ಇರ್ದುಲ್ಲೆ
ತಿರ್ಗಿ ಮನೆಗೆ ಬಾಕನ ಮುಟ್ಟ
ಜೀವನು ಕೈಲಿಲ್ಲೆ

* * * * *

# ಮೋಡ - ಮಳೆ

- ಗುತ್ತಿಮುಂಡನ ದೇವಿಕಾ ಗಿರೀಶ್

ನೀಲಿ ಬಾನ್‌ಲಿ ತೇಲುವ ಮೋಡಗಳೇ
ನೀವೆಲ್ಲಿಗೆ ಹೊರ್ಟದ್ ಆ ಬಾನಂಗಳಲಿ

ಕರಿ... ಮೋಡವೊಂದ್ ಬೆಳಿ... ಮೋಡವೊಂದ್
ರೆಂಕೆ ಇಲ್ಲೆ ಹಕ್ಕಿ ಅಲ್ಲ

ಆದರೂ ಹಾರಿಯಲ್ಲ, ಆಕಸಲಿ
ಮ್ಯಾಲೆ ತೇಲುವ ನಿಂಗೆ ಕೈತಾಂಗ್ ಕೊಟ್ಟವು ಯಾರ್

ಹಾರುವ ರಭಸಲಿ ನೀ ಗುದ್ದ್‌ಕನ
ಪಿಳ್ಳತ ಮಿಂಚಿದ ಸಿಡ್ಲೋ......
ಸೊಪ್ಪು ಉದ್‌ರ್‌ದ ಮರದ ಗೆಲ್ಲ್‌ನಂಗೆ
ಗುಡ್‌ಗಿದ ಗುಡುಗಿಗೋ... ಪ್ರಳಯದ ಸದ್ದ್‌ನಂಗೆ

ಅಬ್ಬಾ ಇದೆಂತತ ಗ್ಯಾನಲಿ ಕುದ್ದ ಹುತ್ತ್‌ಲಿ
ಉದ್‌ರ್‌ತ! ಮುತ್ತ್‌ನ ಮಣಿಗಳಂಗೆ ಆಣಿಕಲ್ಲ್‌ಗ

ಕರ್‌ಗಿ ಸೊರಿಯಕನ ಅದೇ ಮಳೆಹನಿಗ
ಜಿರೀ.. ಗುಟ್ಟುವ ಸದ್ದೇ ತುಂಬಿದ ಜಗತ್ತ್‌ಲೀಗ

ಕೊಚ್ಚಿ ಹರ್‌ದ ನೀರ್ ಕೆಮ್ಮಣ್ಣ್ ತುಂಬಿ
ಕೈತಾಂಗೇ.. ಇಲ್ಲದೇ ತೇಲ್ದ ಮೋಡಕ್ಕೀಗ
ಅದೆಷ್ಟ್ ಶಕ್ತಿ?

* * * * *

# ಹೂಮಳೆ

– ಕೊಟ್ಟಕೇರಿಯನ ಲೀಲಾ ದಯಾನಂದ

ಕತ್ತಲೆ ಕೋಂಬರೆಲಿ ಕಟ್ಟಿ ಇಸಿಯೊಳೆ
ಕನ್‌ಸ್ ಬೀಜನ ಬಿತ್ತಿ ತೆಗ್ದ ಬೆಳೆನ
ಬುಡಿಕಾಗದ್ ಅದ್‌ನ ಹಂಗೇ ಜಳ್ಳಾಕೆ
ನ್ಯಾಯ ಸಿಕ್ಕುದುಲೆ ನಾ ಪಟ್ಟ ಶ್ರಮಕೆ ॥

ಕೆಸ್‌ರ್ ಕಾಲ್‌ಲಿ ಹಸ್‌ರ್ ಕಾಂಬಕೆ
ಕದ್‌ರ್, ಕದ್‌ರ್‌ಲಿ ಭತ್ತ ಉಸ್‌ರ್ ಬಾಚಿಕೆ
ಮಳೆಗಾಳಿಗೆ ಆತ್ ಮೈಯೆಲ್ಲಾ ಚಂಡಿ
ಹಗುರಾತ್ ನೋಡ್‌ಕನ ತುಂಬಿದಾ ಗಾಡಿ ॥

ಏರಿಳ್‌ತ್ ಬೆಲೆ, ನೆರ್ದಾತ್ ತಲೆ
ಲೆಕ್ಕಾಚಾರದ ಬದ್‌ಕ್ ಸುಖ ಕಂಡತ್‌ಲೆ
ಹಂಗೇ ಹಣ್ಣಾತ್, ಬೇನೆಲಿ ಬೆಂದತ್ ಜೀವ
ನಂಗೇ ಗೊತ್ತಾತ್ತೆ ನನ್ನೊಳಗುಟ್ಟು ಭಾವ ॥

ಹೊತ್ತ್ ಮೀರ್ತ್, ಕುದ್‌ಕಂಡ್ ಗ್ಯಾನ ಮಾಡ್ಕನ
ಮುಚ್ಚಿಕಾತ್ತೆ ಸೋರ್‌ತಿದ್ದ ಸುಖದ ಕೊಮ್ಮೆನ
ಹೂ ಮಳೆ ಕಂಡದೆ ಹೊರಗೆ ಬಂದರೆ
ಹಂಗೇ ಕುದ್ದರೆ ಬದ್‌ಕ್ ಬರಡಾದೆ ॥

* * * * *

# ದಲ್ಲಾಳಿ ಜನ್ನ

– ಮನೋಜ್ ಕುಡೆಕಲ್ಲು

ಎಳೆಬೊಳ್ಪು ಆತ್ಲೆನ್ನೂ ಕೋಳೀನೂ ಕೂಂಗಿತ್ಲೆ
ಹೊರ್ಟುಟು ಆಗಲೆ ದಲ್ಲಾಳಿ ಜನ್ನ
ತಿರ್ಗೇಲ್ ನಾಯ್ಗೆಲ್ಲ ಜಂಬರ ಮುಗ್ಸಿದ್
ಕೊಟ್ವವೆ ಊರಿಡಿ ಪಾಂಗ್‌ನಾ
ಎಲ್ಲಿಂದಲೋ ಚಾಂಬಿದಾ ದುಬಾಯಿ ಪ್ಯಾಂಟ್
ಮೊಣ್ಕಾಲ್‌ವರೆಗೆ ಮೊಡ್ಚೀಟು
ನೀರುಳ್ಳಿ ಚೋಲ್ನ್ಯಂತ ಇಸ್ತ್ರೀನೆ ಕಾಣದ
ಕ್ವಾಟನ್ ಅಂಗಿನಾ ತೊಟ್ಟ್‌ದ್
ಚಾರ್ಜ್‌ಗೆ ಇಸಿದ ಮೊಬೈಲ್ ಹಿಡ್ದ್
ಆಚೆಗೆ ಒಂದ್ ರಿಂಗ್‌ನ ಕೊಟ್ಟ್
ದೇವ್ರುಗೆ ಕೈಮುಗ್ದ್ ಗಂಧ ಕುಂಕುಮ
ಮೆತ್ತಿಟು ಅಂವ ತಂತ್ರಿನ ಹಾಂಗೆ
ಕುಂದಕೆ ಕೋಸಿದ ಪಂಚಾಂಗ ಪುಸ್ತಕ
ರೆಟ್ಟೆಗೆ ಸೆಕ್ಸೀಟು ಅಂಬೆರ್ಪುಲಿ.
ರಾಹು ಗುಳಿಂಞ, ಕೇತು ಕುಜಂಗ
ಗೂಡೆ ನೋಡಿಕೆ ಹೋದರೆ ನೆಂಟ್ರಗ
ಇರ್ದೆಲ್ಲ ಜನ್ನ ಬೆನ್ನಿಂದೆ
ಕಿಸೆಲಿರ್ದು ನೂರಾರ್ ಸಂಬಂಧ ಕುದ್ರದ
ಮೂವತ್ತೈದ್ ದಾಟಿದ ಮೋರೇಗ
ಆಚೆಂದ ಏನಾರ್ ಸಾಬೂನು ಹಾಕಿರೆ
ಎಂತವರ್ರೂ ಮಾಡ್ದೆ ಊರ್ವಶಿನಾಂಗೆ
ಗುಣಗಣಂಗ ಕೂಡಿದ್ ಬಾತ್ಲರೆ
ನಿಮೂರ್ತಿ ಹುಡ್ಕೀದೆ ಎಲ್ಲದ್ಕು
ಮೊಗುವ ನಾಲ್ಗೆಗೆ ಬಂದದ್ ಎಲ್ಲ
ಸತ್ಯಂತ ತಿಕ್ಕದ್ ಬೋಳಂಗ
ಬೊಳ್ಪುನ ಚಾಯದ ಬಾಳೆಣ್ಣ್ ಎಲ್ಲ
ಆಡ್ವುದು ಹಡ್ಗ್ ಕಿಸೆಲ್ಯವನ
ಉಂಡರೆ ಅಂವ, ಇರ್‍ಕಿಲೆ ಒಳ್ಕಡೆ
ನೆಕ್ಕೀದ್ ಬಾಡ್ದ ಬಾಳೇಲಿ

* * * * *

# ಮೋರೆ

– ಮನೋಜ್ ಕುಡೆಕಲ್ಲು

ತಟ್ಟಿನ ಸೆರೆಲಿ ಬೆಳ್ಳಿ ಬಟ್ಲಂಗೆ
ಬೆಳ್ಳಂಗೆ ಮೋರೆ ಇಣ್ಕೀದೆ ॥

ತಂಗಾಳಿಗೆ ತೇಲಿ ಉಯ್ಯಾಲೆ ಆಡ್ವ
ಕೂದಲ್ ರೇಶ್ಮೆ ಎಳೆನಾಂಗೆ ॥

ಜೊಂಪೇಕೋ ಹತ್ತೀಟೂ ಬೊಳ್ಪುಗೆ ಕುದ್ದಲ್ಲೆ
ಕಾಕಡ ಮಲ್ಲಿಗೆ ಪರಿಮಳಲಿ ॥

ಹುಬ್ಬೆರಡರ ಕೊಂಡಿಗೆ ಕೆಂಬಣ್ಣ ಸೂರ್ಯ
ಹಣೆತೇಳ್ವ ಅಗಸಲಿ ಕುಂಕುಮ ॥

ರೆಪ್ಪೆಂಬ ಚಿಟ್ಟೇನ ರೆಕ್ಕೆನ ನಡುಲಿ
ಚೆಲ್ಲಾಟ ಆಡುವೆ ಕಣ್ಣ್‌ಗ ॥

ಕೆರೆನ ಕೆಂದಾವರೆ ಮೊಗ್ಗ್‌ನ ಹಾಂಗೆ
ಮೂಗದ್ ಕಾಂಬೋದು ಓರೇಲಿ ॥

ಸ್ಪಟಿಕದ ಹಲ್ಲ್‌ಗ ಸೆರೆಯಾಗಿ ಕುದ್ದೋಳ
ನೇರಳೆ ತುಟಿಯೆರ್ಡರ ಮಧ್ಯಲಿ ॥

ಎದೆಯೆಂಬ ಗುಡಿಲಿ ಗಂಟೇನ ಶಬ್ದ
ಕೆಬಿಲಿದ್ದ ಜುಂಕಿನ ವಯ್ಯಾರಕೆ ॥

ಪೊರ್ಲ್‌ನ ಮೋರೇಗ ಯಾಗೋಳು ಚಂದಾನೆ
ಮಾಡದೆ ಹೊಸತನದ ಸಿಂಗಾರನ ॥

ಕಣ್ಣ್‌ಲಿ ಕಾಂಬ ದೇವತೆನ ನೆನ್ಸಿರೆ
ಹಳ್ಳಿನ ಸೊಗಡ್‌ಲೇ... ಲಾಯ್ಕ್‌ಯಾ.. ॥

* * * * *

# ಕುಡ್ಕತನದ ಅಪ್ಪ!

– ಭವಾನಿಶಂಕರ ಅಡ್ತಲೆ

ಹಿಂಬೊತ್ತು ಅಪ್ಪ ಕುಡ್ಕಂಡ್ ಬಾತ್।
ಅವ್ವನ ಪಿತ್ತ ನೆತ್ತಿಗೆ ಏರ್ತ್॥
ಅಪ್ಪನ ಆರ್ಭಟೆ ದೂರಂದ ಕೇಳ್ತ್।
ಪಡೆಮುತ್ತಿದ್, ಬಾತ್‌ಂತಅವ್ವ ಹೇಳ್ತ್॥

ಅಪ್ಪನ ಸರ್ವೆದಾರಿ ಉದ್ದಕಾತ್।
ಗುಂಡಿಗೆಕಾಲ್ ಹಾಕಿ, ಮುಂಗರ್ಸಿ ಬೀತ್॥
ಬಿದ್ದಲಿಂದ ಕೇಳ್ತ್ ಏ.....ರಂಡೆ......ಮುಂಡೆ।
ಕೈಲಿದ್ದದ್ ಹರ್ರಿತ್ ಭೂತಾಯಿ ಬಂಗ್‌ಡೆ॥

ಅಪ್ಪನೂ, ಅವ್ವನೂ ಹಾವು ಮುಂಗಿಸಿಂಗಾದೊ।
ಮಕ್ಕಳೂ ಮರಿಗಳೂ ನೋಡಿ ಬೆರಗಾದೊ॥
ಅವ್ವನ ಕೈಲಿತ್ತ್ ಹೊತ್ತಿ ಒಳ್ದ ಸೌದೆ।
ಅಪ್ಪನ ಕೈಲಿತ್ತ್ ಬರೀ ಕುಂಬು ಕುದೆ!॥

ಉರುಡಾಟಕ್ಕೆ ಇಬ್ಬರ್‌ಂದೊಳು ಕೈಂದರೆಟ್ಟಿ ಹೋತ್।
ಅವ್ವನ ತಲೆಜುಟ್ಟು ಅಪ್ಪನಕೈಲಿತ್ತ್॥
ಅಪ್ಪನಚಡ್ಡಿ ಒಳಗೆ ಅವ್ವನ ಕೈ ಸೇರ್ತ್।
ಇಬ್ಬರಿಗೂ ತಡ್ಯೆಕಾಗದ ಬೇನೆ ಶುರುಆತ್॥

ನಿನ್ನ ನಾ ಇಸಿಕಿಲೆಂತ ಅಪ್ಪ-ಅವ್ವಂಗೇಳ್ತ್।
ಅದ್ಕೆ ಮುಂದೆ ಕೊಲ್ಲುವೆಂತ ಅವ್ವ ಅಪ್ಪಂಗೇಳ್ತ್॥
ನೋಡಿಕಂಡಿದ್ದ ಮಕ್ಕಳಿಗೆ ಜೀವ ಹೋದಾಂಗಾತ್।
ಏನಾರ್ ಮಾಡಿ ಬುಡ್ಸೊಕುಂತ ಮಕ್ಕಳ ಮನ್ಸಿಗೆಆತ್॥

ಓ.....ಅಪ್ಪನೂ, ಅವ್ವನೂ ಸತ್ತೊಂತ ಮಕ್ಳ ಬೊಬ್ಬೆಆತ್।
ಪಕ್ಕದ ಮನೆ ಅಪ್ಪಯಣ್ಣ ಓಡಿಕ್‌ಂಡ್ ಬಾತ್॥
ಯಾಗೋಳು ನಿಮ್ಮ ಹಣೆಬರಂತ, ಬಾಯಿಗೆ ಬಂದಾಂಗೆ ಬೈತ್।
ಜಗಳ ಬುಡ್ಸಿ ಹೇಳ್ತ್; ನಿಮ್ಮಂದಾಗಿ ಮಕ್ಕಳ ಬಾಳ್ ಹಾಳಾತ್॥

* * * * *

# ಹಾಗಲಕಾಯಿ ಗೊಜ್ಜು

– ಎಂ.ಜಿ. ಕಾವೇರಮ್ಮ

**ಬೇಕಾದ ಸಾಮಾನ್‌ಗ**

ಹಾಗಲಕಾಯಿ – 2 ದೊಡ್ಡದ್
ಕುಮ್ಟೆ ಮೆಣ್ಸ್ – 5
ಊರ್ ಮೆಣ್ಸ್ – 5
ಕೊತ್ತಂಬರಿ – 2 ಸವುಂಟು
ಜೀರಿಗೆ – 1/2 ಸವುಂಟು
ಮೆಂತೆ – 1 ಸವುಂಟು
ಉದ್ದಿನ ಬೇಳೆ – 2 ಸವುಂಟು
ಅರ್ಸಿಣ ಹೊಡಿ – 1ಸವುಂಟು
ಕಾಯೆ ಹೂವು – 1ಸವುಂಟು
ಬೆಲ್ಲ – ದೊಡ್ಡ ನಿಂಬುಳಿನಸ್ಟ್
ಹುಣ್ಸೆ ಹುಳಿ – ದೊಡ್ಡ ನಿಂಬುಳಿನಷ್ಟ್
ನೀರುಳ್ಳಿ – 1 ಗೆಂಡೆ
ರುಚಿಗೆ ಬೇಕಾದಸ್ಟ್ ಉಪ್ಪು
ಅಗ್ರಣೆಗೆ – ಒಣ್ಗಿದ ಮೆಣ್ಸ್ –2
ಬೆಳ್ಳುಳ್ಳಿ – 6 ಎಸಳ್
ದಾಸಿಮೆ – 1ಸವುಂಟು
ಉದ್ದಿನ ಬೇಳೆ– 1ಸವುಂಟು
ಕರಿಬೇವಿನ ಸೊಪ್ಪು 5–6

**ಮಾಡುವ ವಿಧಾನ:–**

ಹಾಗಲಕಾಯಿನ ಸಣ್ಣ ಸಣ್ಣ ತುಂಡು ಮಾಡಿ ಲಾಯ್ಕ್‌ಲಿ ತೊಳ್ದ್ ಇಸಿಕಣಿ. ಹುಣ್ಸೆ ಹುಳಿನ ನೀರ್‌ಲಿ ನೆನ್ಸಿ ಅದರ ರಸ ತೆಗ್ದ್ ಇಸಿಕಣಿ. ಎರ್ಡ್ ಬಗೆ ಒಣ್‌ಂಗಿದ ಮೆಣ್ಸ್‌ನ ಕೊತ್ತಂಬರಿ, ಜೀರಿಗೆ, ಮೆಂತೆ, ಉದ್ದಿನ ಬೇಳೆ, ಕಾಯೆ ಹೂವುನ ಬೇರೆ ಬೇರೆ ಹಂಞ ಎಣ್ಣೆ ಹಾಕಿ ಹೊರ್ದ್ ಅದರ ಮಿಕ್ಸಿಲಿ ಹಾಕಿ ಹೊಡಿಮಾಡಿ ಇಸಿಕಣಿ. ಅದ್ಕೆ ಒಂದು ಸವುಂಟು ಅರ್ಸಿಣ ಹೊಡಿನ ಸೇರ್ಸಿಕಣಿ. ನೀರುಳ್ಳಿನ ಉದ್ದಕ್ಕೆ ಕೊಯ್ದ್ ಇಸಿನಿ.

ಈಗ ಒಲೆ ಮೇಲೆ ಎರ್ಡ್ ಕೈ ಇದ್ದ ಬನಲೆನ ಇಸಿ ನಾಕ್ ಸವುಂಟು ಎಣ್ಣೆ ಹಾಕಿನಿ. ಅದ್ಕೆ ಎರ್ಡ್ ಒಣ್‌ಂಗೆಲ್ ಮೆಣ್ಸ್‌ನ ಮುರ್ದ್ ಹಾಕಿನಿ. ಬೆಳ್ಳುಳ್ಳಿ ಎಸಳ್‌ನ ಗುದ್ದಿ ಹಾಕಿನಿ. ಅದ್ ಕೆಂಪಾಕನ ದಾಸಿಮೆ ಹಾಕಿ ಹೊಟ್ಟಿಸಿ. ಆ ಮೇಲೆ ಉದ್ದಿನ ಬೇಳೆ ಒಂದು ಸವುಂಟು ಹಾಕಿನಿ. ಅದ್ ಕೆಂಪಾಕನ ಕರಿಬೇವುನ ಸೊಪ್ಪು ಕೊಯ್ದ್ ಇಸಿದ ನೀರುಳ್ಳಿ ಹಾಕಿನಿ. ಲಾಯ್ಕ್‌ಲಿ ಮೊಗ್ಗಿನಿ. ನೀರುಳ್ಳಿ ಕೆಂಪಾಕನ ಕೊಯ್ದಿಸಿದ

ಹಾಗಲಕಾಯಿ ತುಂಡು ಹಾಕಿ ಬಾವೊಡೆ ಮುಚ್ಚಿಸಿನಿ. ಅಗ್ರಣೆ ಎಣ್ಣೆಲಿ ಅದ್ ಹಂಞ ಬಾಡಿಕನ ಅದ್ಕೆ ಹುಣ್ಸೆ ಹುಳಿ ನೀರ್ ಹಾಕಿ, ರುಚಿಗೆ ಬೇಕಸ್ಟ್ ಉಪ್ಪು ಹಾಕಿ ಬೇಸಿನಿ. ಅದ್ ಬೇಯಕಾಕನ ಬೆಲ್ಲ ಸೇರ್ಸಿ ಕೊಡಿಸಿನಿ. ಅದರೊಟ್ಟಿಗೆ ಹೊಡಿ ಮಾಡಿಸಿದ ಸಂಬಾರನ ಹಾಕಿ ಮೊಗ್ಸಿನಿ. ನೀರ್ ಸಾ ಕಾತ್ಲರೆ ಹಂಞ ನೀರ್ ಸೇರ್ಸಿಕಣಿ. ಅದ್ ಬೆಂದ್ ಒರ್ವಾಕನ ಇಳ್ಗಿಸಿ. ಬೆಲ್ಲ ಹೆಚ್ಚ್ ಬೇಕಾದೊವು ಹೆಚ್ಚಿಗೆ ಸೇರ್ಸಿಕಣಕ್. ಈಗ ರುಚಿ ರುಚಿನ ಹಾಗಲಕಾಯಿ ಗೊಜ್ಜು ತಿಂಬಕೆ ರೆಡಿ.

## ಗಾದೆಗಳು

ಸಂಗ್ರಹ: – ಶ್ರೀಮತಿ ತುಳಸಿ ದಯಪ್ರಸಾದ್

1. ಅಜ್ಜಿ ಇಲ್ಲದ ಮನೆ ಮೊಜ್ಜಿಗೆ ಇಲ್ಲದ ಊಟ
2. ಅಡಿಗೆ ಬಿದ್ದರೂ ಮೂಕು ಮೇಲೆ
3. ಅಂಡೆಲಿ ಇಲ್ಲೆ ಅಳೆಗೆಲಿ ಇಲ್ಲೆ
4. ಅಜ್ಜಂಗೆ ಸಾವ್‌ನ ಚಿಂತೆ, ಮಕ್ಕಳಿಗೆ ಆಟದ ಚಿಂತೆ
5. ಅಜ್ಜಿ ಸಾಂಕಿದ ಮಂಜ ಬೊಜ್ಜಕ್ಕೂ ಬಾರದ್
6. ಅತಿ ಆಸೆ ಗತಿಗೇಡ್
7. ಅತ್ತೆ ಬೊಯ್ದು ಬುದ್ಧಿಗೆ, ಸೊಸೆ ಬೊಯ್ದು ಸುದ್ದಿಗೆ
8. ಅನ್ಯಾಯದ ಗಳ್ಸಿದ್ ಒಳಿಯದ್, ನ್ಯಾಯಂದ ಗಳ್ಸಿದ್ ಅಳಿಯದ್
9. ಅಯ್ಯೆ ಹೊಟ್ಟೆ ನೋಡ್ತ್, ಹೆಣ್ಣ್ ಜೋಬು ನೋಡ್ತ್
10. ಆಡ್ ಮುಟ್ಟದ ಸೊಪ್ಪಿಲ್ಲೆ
11. ಆಸೆಗೆ ಮಿತಿ ಇಲ್ಲೆ, ಗೂಡೆಗೆ ಗತಿ ಇಲ್ಲೆ
12. ಉಂಡದ್ ಮೈಗೆ ಹಿಡಿಯೊಕು, ಕಂಡದ್ ಮನ್ಸಿಗೆ ಹಿಡಿಯೊಕು
13. ಹುಟ್ಟುಗುಣ ಘಟ್ಟ ಹತ್ತಿರೂ ಬುಡಿಕಿಲೆ
14. ಉಂಬಕಾಗಿ ಬದ್‌ಕ್‌ಬಡ, ಬದ್‌ಕ್‌ಗಾಗಿ ಉಣು
15. ಊಟ ಕೊಟ್ಟ ಮನೆ ಹಾಳಾಕಿಲೆ, ಗೊಬ್ಬರ ಕೊಟ್ಟ ಮರ ಸಾಯಕಿಲೆ
16. ಎತ್ತಿ ಬೀಳ್ಸುವ ಕುದ್ರೆಂದ, ಹೊತ್ತು ಸಾಗ್ಸುವ ಕತ್ತೆ ಲೇಸ್
17. ಐಶ್ವರ್ಯ ಬಾಕನ ಅರ್ಧ ರಾತ್ರಿಲಿ ಕೊಡೆ ಹಿಡ್ದಾಂಗೆ
18. ಎರಡು ಕೈ ಸೇರದೆ ಚಪ್ಪಾಳೆ ಆದುಲೆ
19. ಊರಿಗೆ ಅರಸ ಆದರೂ ಅಯ್ಯೆಗೆ ಮಂಜನೇ
20. ಎತ್ತ್ ಏರಿಗೆಳ್ಯಕನ ಕೋಣ ನೀರಿಗೆಳ್ತ್

# ಅರೆಭಾಷೆ ಗಾದೆಗ

ಸಂಗ್ರಹ: ಯೋಗೀಶ ಹೊಸೊಳಿಕೆ

- ಅಕ್ಕಂಗೆ ಆಳಿಲ್ಲೆ, ಕುಕ್ಕಂಗೆ ಕೂಳಿಲ್ಲೆ
- ಅತ್ತೆ ಮೇಲೆ ಸಿಟ್ಟ್, ಕೊತ್ತಿಗೆ ಪೆಟ್ಟ್
- ಯಾರದೋ ಕಾಸ್ ಯಲ್ಲಮ್ಮನ ಜಾತ್ರೆ
- ಕೊಡ್ದು ಮೂರ್ ಕಾಸ್, ತೊಂಬರ ತುಂಬ ಹಾಸ್
- ಗಂಡ ಪಟ್ಟೆ ಸೀರೆ ತಂದದೆಂತ, ಹೆಣ್ಣ್ ಇದ್ದ ಸೀರೆನ ಸುಟ್ಟತ್ ಗಡ
- ತಾನ್ ಕಳ್ಳ, ಪರರ ನಂಬ
- ಕುಂಬಳಕಾಯಿ ಕದ್ದಂವ ಹೆಗಲ್ ಮುಟ್ಟಿ ನೋಡ್ತ್ ಗಡ
- ಮಟ್ಟ ತಿಳ್‌ಕಣದೆ ಮಾತಾಡ್ ಬಡ
- ಮನೆ ಕಟ್ಟಿ ನೋಡು ಮೊದ್ವೆ ಮಾಡಿ ನೋಡು
- ಸತ್ಯದ ಕೆಲ್ಸ ಶಾಶ್ವತ
- ಸಾಲ್‌ಲಿ ಬಂದ ಹಣ ನೀರ್‌ಲಿ ಹೋದಂಗೆ
- ಹುಟ್ಟ್ ಗುಣ ಬೆಟ್ಟ ಹತ್ತಿರೂ ಹೋಕಿಲ್ಲೆ
- ಹೇಳ್ದು ಪುರಾಣ ಹಾಕುದು ಗಾಣ
- ಹಿರಿ ಅಕ್ಕನ ಚಾಳಿ ಮನೆ ಮಕ್ಕಳಿಗೆಲ್ಲಾ
- ಎತ್ ಏರಿಗೆಳಿಯಕಾಕನ ಕೋಣ ನೀರಿಗೆಳ್ದದೆ
- ಮಜ್ಜಿಗೆಗೆ ಬಂದವಂಗೆ ಎಮ್ಮೆ ಕ್ರಾಯ ಏಕೆ?
- ನೀರ್ ನ ಮೇಲೆ ಗುಳ್ಳೆನಂಗೆ
- ಸಾಲ ಮಾಡ್ಲುಬೇಡ, ಸಾಲ ತಕಂಬದೂ ಬೇಡ
- ಸಂಕಟ ಬಾಕನ ವೆಂಕಟರಮಣ
- ಸಾವುಕಾರನ ಊಟ ಕಾಯಿಲೆಗೆ, ಬಡವನ ಊಟ ಆರೋಗ್ಯಕ್ಕೆ
- ಇಪರೀತ ಬುದ್ದಿ ಅಭಿಮಾನ ಭಂಗ
- ಐಸೊರ್ಯ ಬಾಕನ ಅರ್ದ ರಾತ್ರಿಲಿ ಕೊಡೆ ಹಿಡ್ದಂಗೆ
- ಅಂಬು ಅಟ್ಟಲಿ ಬಿಲ್ಲ್ ಬೆಟ್ಟಲಿ
- ಕೆಟ್ಟ ಮೇಲೆ ಬುದ್ಧಿ ಸತ್ತ ಮೇಲೆ ದುಃಖ
- ಉದ್ಯೋಗನೆ ಪುರುಷ ಲಕ್ಷಣ ಗಡ
- ಇಳಿಯಕಾಕನ ತುಂಬಾ ಗ್ಯಾನ ಮಾಡ್
- ಹೊಟ್ಟೆಗೆ ಹಿಟ್ಟ್ ಇಲ್ಲೆ ಜುಟ್ಟಿಗೆ ಮಲ್ಲಿಗೆ ಹೂ
- ನೆಂಟ್ರ ಮೇಲೆ ಪ್ರೀತಿ ಅಕ್ಕಿ ಮೇಲೆ ಆಶೆ
- ಅಂಗ ಇಲ್ಲದವಂಗೆ ಮಂಗನ ಚೇಷ್ಟೆ
- ಕೋಣಿಕಾಗದ ಸೂಳೆಗೆ ಅಂಗಳ ಡೊಂಕ್

- ಅಣ್ಣ ಸತ್ತರೆ ಅಮಾಸೆ ನಿಂತದ್ಯಾ
- ಅಲ್ಪ ವಿದ್ಯೆ ಕಲ್ತವರಿಗೆ ಮಹಾ ಗರ್ವ
- ಬೆರಿ ಕೈಲಿ ಮೊಳ ಹಾಕಿದಂಗೆ
- ಪ್ರಾಯ ಬಾಕನ ನಾಯಿ ಸಹ ಲಾಯಿಕ್
- ಕಸ್ಟಕ್ಕೆ ಆದವನೇ ನೆಂಟ
- ಜ್ಞಾನ ಇಲ್ಲದವರಿಗೆ ಸಿಟ್ಟ್ ಜಾಸ್ತಿ
- ಕಳ್ಳನ ಹೆಜ್ಜೆ ಕಳ್ಳಂಗೆ ಗೊತ್ತ್
- ದಯೆ ಇದ್ದರೆ ಭಯ ಇಲ್ಲೆ
- ಕಂಕುಳ್ ಲಿ ದೊಣ್ಣಣಿ ಕೈಲಿ ಶರಣ್
- ಅವರ ಮನೆ ದೋಸೆ ತೂತ್ ನಮ್ಮ ಮನೆ ಕಾವುಲಿ ತೂತ್
- ಓದಿ ಓದಿ ಕೆಟ್ಟ್ ಹೋತ್ ಕೋಚ ಬಟ್ಟ
- ಸಂಪ್ಪಾದಿಸುವು ಒಬ್ಬ ತಿಂಬೊದು ಇನ್ನೊಬ್ಬ
- ಬಗ್ಗಿದವಂಗೆ ಇನ್ನೊಂದ್ ಗುದ್ದು
- ಉತ್ತರ ಶ್ಯರ್ಿ ಒಲೆ ಮುಂದೆ
- ಸ್ಥಿರ ಬುದ್ದಿಂದ ಕಸ್ಟನ ಜೈಸಕ್
- ಸೆಟ್ಟಿ ಮಾಡ್ದ ದಂಡಕ್ಕೆ ಭಟ್ಟ ಮಾಡ್ ಪಿಂಡಕ್ಕೆ ಹೊಲಿಯ ಮಾಡ್ದ ಹೆಂಡಕ್ಕೆ
- ಬಟ್ರ್ ಹೋದಲ್ಲಿ ನ್ಯಾಯ ತಪ್ಪಿಕ್ಕಿಲೆ ಮಣಂಜಿ ಹೋದಲ್ಲಿ ಕಲ್‌ಂಕ್ ತೊಪ್ಪಿರಲೆ
- ಭಟ್ಟ, ಬಂಟ, ಪೂಜಾರಿ ಕೊಡದೆ ಕೊಲೆ ನಡೆಕ್ಕಿಲ್ಲೆ
- ಲಾಭ ಇಲ್ಲದೆ ಶೆಟ್ಟ ಹಳ್ಳಕ್ಕ ಹೋಕಿಲೆ
- ಕುದ್ರ ಓಡಿ ಹೋತ್ – ಕೊಳ್ಳೆ ಹೊಡ್ದ್ ಹೋತ್
- ಮರ ನೋಡಿ ಬೊಳ್ಳಿ ನೆಡೊಕು, ಗುಣ ನೋಡಿ ಹೆಣ್ಣ್ ಕೊಡೊಕು
- ಅಟ್ಟಲಿ ಕ್ಯಾಬೆಲ್ಲ ಇದ್ದರೆ ದಿಕ್ಕಂಗೆ ನಿದ್ರೆ ಬಾಕಿಲೆ
- ಉಂಬೋದು ತಿಂಬೋದು ನೆಂಟಾಚಾರ ಕೊಡ್ದು ತಕ್ಕಂಬೊದು ಲೆಕ್ಕಾಚಾರ
- ಹಾಲ್ ತನಿಗೆ ಎಕ್ಕದಿದ್ದರೆ ಕೊತ್ತಿ ಸಾ ಪ್ರಾಮಾಣಿಕ
- ಸಾವಿರ ಹಾಸಿಗೆ ಮೇಲೆ ಮಲ್ಗಿರೂ ಬೇಕಾದ್ ಒಂದೇ
- ಹಸ್ದ್ ವರ ಮುಂದೆ ಭಾಷಣ ಮಾಡ್ದಂಗೆ
- ಸೆಗ್‌ಣಿಗೆ ಬಜಂಟ್ ಸಾಕ್ಷಿ
- ಬೀದಿ ಮಾರಿನ ಮನೆಗೆ ಸೇರ್ಸಿಕಂಡ ಹಾಂಗೆ
- ಕೂಸು ಹುಟ್ಟಕ್ಕೆ ಮುಂದೆ ಅಂಗಿ ಹೊಲ್ಸಿದ ಹಾಂಗೆ
- ಅಜ್ಜಿ ಸಾಂಕಿದ ಪಿಳ್ಳಿ ಬೊಜ್ಜಕ್ಕೂ ಆಕಿಲೆ
- ಅತ್ತೆಗೊಂದು ಕಾಲ ಸೊಸೆಗೊಂದು ಕಾಲ
- ಎಲ್ಲಾ ಬಿತ್ತ್ ಒಳಗೆ– ಗ್ಯಾರಾ ಬಿತ್ತ್ ಹೊರಗೆ
- ಕಾಡ್ ಕೋಳಿಗೆ ಸಂಕ್ರಾಂತಿ ಇಲ್ಲೆ
- ತೀಟೆ ತೀರ್ದ ಮೇಲೆ ಮೊಂಡಿ ಸಂಗ ಯಾಕೆ?
- ಓಡಿ ಹೋಗುವುಳು ಹಾಗೆಲಿ ಹೆಪ್ಪು ಹಾಕಿದ್ಯಾ

- ರಾತ್ರಿ ನೋಡ್ದ್ ಬಾಮಿಗೆ ಹಗ್‌ಲ್ ಬಿದ್ದಂಗೆ
- ಮೊರಿ ನಾಯಿನ ಕುಬಳ್‌ಲಿ ಕುದ್ರಿಸಿರೆ ಹೊಲ್ಸ್ ಕಾಂಬಕನ ತಬ್ಕಂತ ಹಾರ್‍ದಂಗೆ
- ಕಂಡದರ ಕಂಡಾಂಗೆ ಹೇಳ್ರೆ ಕೆಂಡದಂತ ಕೋಪ
- ಆಳ್ ಹೋದಲ್ಲಿ ಹಾಳ್- ಮಂಜ ಹೋದಲ್ಲಿ ಮಧ್ಯಮ, ತಾನ್ ಹೋದಲ್ಲಿ ಉತ್ತಮ
- ಸಮುದ್ರ ಈಜಿದವಂಗೆ ಹೊಳೆ ಯಾವ ಲೆಕ್ಕ
- ಸಣ್ಣ ದೀಪಕ್ಕೆ ಗಾಳಿ ಶತ್ರು ದೊಡ್ಡ ಜ್ವಾಲೆಗೆ ಅದೇ ಗಾಳಿ ಮಿತ್ರ
- ತುಂಬಾ ಕುಶೀಲಿ ವಾಗ್ದಾನ ಮಾಡ್ ಬಡ, ತುಂಬಾ ಸಿಟ್ಟ್ ಲಿ ಕಾಗದಕ್ಕೆ ಜವಾಬು ಬರಿಬಡ
- ನಮ್ಮ ಸುರುನ ಹೆಜ್ಜೆನ ಮೇಲೆ ಇಡೀ ಜೀವಮಾನದ ಭವಿಷ್ಯ ನಿತ್ತುಟು.
- ದೊಡ್ಡವರ ಮಾತು ಲಾಯಿಕ ಬಡವರ ಊಟ ಲಾಯಿಕ
- ಸತ್ತ ಎಮ್ಮೆಗೆ ಹತ್ತು ಕೊಂಡೆ ಹಾಲ್
- ಊರಿಗೆ ಬಂದ ಗೂಡೆ ನೀರಿಗೆ ಬಾಕಿಲೆನೋ
- ಸರಿ ಸಮಾರ ಎಡೇಲಿ ಮುಪ್ಪೇಕೆ ಗೋಣಗುಟ್ಟೋಕು?
- ಎಲಿ ಹೋದಲ್ಲಿ ಹುಲಿ ಹೋತ್‌ಂತ ಹೇಳ್‌ವ ಜನ
- ಪಾಪಿ ಹೋದಲ್ಲಿ ಮೊಣ್ಕಾಲ್ ಗೆ ನೀರ್ ಗಡ
- ಕಳ್ಳ ಕದಿಯಕನ ಕೊಂಬಚೇಳ್ ಕಚ್ಚಿದಂಗೆ
- ಕೆಮ್ಮು ಮತ್ತೆ ಹಾದರ ಅಡ್‌ಂಗಿಸಿರೆ ಹೋರ ಬೀಳ್ದು ಜಾಸ್ತಿಗಡ
- ಮಲ್ಲಿಗೆದೊಟ್ಟಿಗೆ ಬಾಳೆ ನಾರಿಗೆ ಕ್ರಯ
- ತಣ್ಣೀರಿಲೇ ಗುಳ್ಳೆ ಬಾಕನ ಬಿಸಿ ನೀರ್‌ಲಿ ಹೇಂಗೆ ಆದು
- ಮರಕೆ ಹೊಡ್ದ್ ಗೆಲ್ಲಿಗೆ ತಾಗ್‌ಸುದು ಬೇಡ
- ಅಪ್ಪನಂಗೆ ಮಂಜ ನಾಯಿನಂಗೆ ಬಾಲಾ
- ಹಾಸಿಗೆ ಇದ್ದಷ್ಟೆ ಕಾಲ್ ನೀಡೋಕು
- ದುಡ್ಡು ಇದ್ದಂವ ದೊಡ್ಡಪ್ಪ
- ಕುಮಾರವ್ಯಾಸ ಕವಿ ಹಾಡ್ ಹೇಳ್ರೆ ಕಲಿಯುಗನೇ ದ್ವಾಪರ ಆದೆಗಡ
- ಹೆಂಡ ಕುಡ್‌ದವನ ಹೆಮ್ಮೆ ನೋಡೊಕಡ ಬಂಗಿ ಕುಡ್ದವನ ಭಂಗ ನೋಡೊಕಡ
- ಕೆಲ್ಸ ಇಲ್ಲದವನ ತಲೆ ಕೆಟ್ಟ ಗ್ಯಾನಗಳ ನೆಲೆ
- ಕಳ್ಳನ ಗೊತ್ತಿದ್ದ್ ಮನೆಲಿ ಸಾಕಂಬೋದು ಕೆಂಡನ ಸೆರ್‍ಗ್‌ಲಿ ಕಟ್ಟಿಕಂಬೋದು ಎರ್ಡೂ ಒಂದೇ
- ಹಣ ಕಂಡರೆ ಹೆಣ ಕೂಡಾ ಬಾಯಿ ಬುಟ್ಟದೆ ಗಡ
- ಹಣ್ಣಲೆ ಉದ್ರ್ ಕನ ಕಾಯೆಲೆ ನೆಗಾಡ್ದು
- ಆಟ್ಟಿಂದತ್ತ ಅರೆಗಾಲ ಮಾಯಿಂದತ್ತ ಮಳೆಗಾಲ
- ಕಟ್ಟಿದ ಉಂಬುಳು ರಕ್ತ ಕುಡಿಯದೆ ಇರ್ದುಲೆ

## ಹಿಂಗಾರ ತ್ರೈಮಾಸಿಕ ಪತ್ರಿಕೆ ಚಂದಾದಾರನ ತಿಳುವಳ್ಕೆಗೆ

- ಕರ್ನಾಟಕ ಅರಬಾಸೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿ ಕಡೆಂದ ಪ್ರಕಟ
- ಆಗ್‌ವ 'ಹಿಂಗಾರ' ಪತ್ರಿಕೆನ ನೀವ್ ಎಲ್ಲವು ಸದಸ್ಯರ್ ಆಕು. ಬಿಡಿ ಸಂಚಿಕೆ
- ಬೆಲೆ ರೂ. 20.00, ತ್ರೈವಾರ್ಷಿಕಕೆ ರೂ. 200.00 ಅದೆ.
- ಸದಸ್ಯರ್ ಆದವುಕೆ ಪತ್ರಿಕೆನ ಅಂಚೆಲಿ ಕಳ್ಸುವೆ.
- ನೀವ್‌ಗ್ಳ ಪರಿಚಯಸ್ತರಿಗೆ ಸದಸ್ಯರ್ ಆಕೆ ತಿಳ್ಸೊಕು.
- ಕತೆಗ / ಪದ್ಯಗ / ಚುಟುಕ /ಲೇಖನಗ ಇತಂವುಕ್ಕೆಲ್ಲಾ ಅವಕಾಸ ಉಟ್ಟು.
- ಬರವಣಿಗೆ ಮಾತ್ರ ನಾಲ್ಕ್ ಪುಟಕೆ ಸೀಮಿತ ಇರೊಕು.
- ಪುಟದ ಒಂದು ಬದಿಲಿ ಮಾತ್ರ ಬರ್ದಿರಕು.
- ಹೆಸರ್ / ವಿಳಾಸ / ದೂರವಾಣಿ ಅಂಕಿಗ ಬರ್ದಿರಕು.


ನಾವ್‌ಗ್ಳ ವಿಳಾಸ :

**ಸಂಪಾದಕರ್**

ಹಿಂಗಾರ ತ್ರೈಮಾಸಿಕ ಪತ್ರಿಕೆ

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ

1ನೇ ಮಹಡಿ, ಕಾಫಿಕೃಪಾ, ರಾಜಾಸೀಟ್ ರಸ್ತೆ, ಮಡಿಕೇರಿ –571 201,

ಕೊಡಗು ಜಿಲ್ಲೆ

ಈಮೇಲ್ : arebaseacademy@gmail.com

ವೆಬ್‌ಸೈಟ್ : www.arebhasheacademy.com

ದೂರವಾಣಿ : 08272 –223055


## ಅಕಾಡೆಮಿಯ ಪ್ರಕಟಣೆಗ

ಸರ್ಮಾಲೆ : ಎಂ.ಜಿ ಕಾವೇರಮ್ಮ

ಅಜ್ಜಪ್ಪನ ಕತಾ ಭಂಡಾರಂದ ಹೆರ್ಕಿದ ಕತೆಗ : ಎಂ.ಜಿ ಕಾವೇರಮ್ಮ

ಬೇರ್‌ಲಿ ಚಿಗ್‌ರ್ : ಬೈತಡ್ಕ ಜಾನಕಿ ಬೆಳ್ಯಪ್ಪ

ಕುಂಕುಮ : ಪೂಜಾರೀರ ಜಿ. ಮಾದಪ್ಪ

ಬೊಲ್ಪಾಕನ ಮುಗ್ತ್ : ವಿದ್ವಾನ್ ಟಿ.ಜಿ ಮುಡೂರು

ಬೇಟೆನ ಬಿರ್ಸ – ಬಡ್ಡಡ್ಕ ಅಪ್ಪಯ್ಯ ಗೌಡ್ರು : ವೇದಾವತಿ ಅನಂತ ಬಡ್ಡಡ್ಕ

ಬೆಳ್ಳಿಮುಷ್ಠಿ : ಕಟ್ರತನ ಕೆ. ಬೆಳ್ಯಪ್ಪ

ತೋರಣ : ಬಾರ್ಯಂಡ ಆರ್. ಜೋಯಪ್ಪ

ಬೊಲ್ಪು : ಲೋಕೇಶ್ ಕುಂಚಡ್ಕ

ಮತ್ತೆ ಸಿಕ್ಕಿತ್ ಕುಂಕುಮ : ಕಟ್ರತನ ಲಲಿತ ಅಯ್ಯನ

# ಅಕಾಡೆಮಿ ಪ್ರಾಯೋಜಿಸಿದ ಕಾರ್ಯಕ್ರಮಗ

03.06.2016 ರಂದ್ ಕುಶಾಲನಗರ ರೈತ ಸಮುದಾಯ ಭವನ ಇಲ್ಲಿ ಕರ್ನಾಟಕ ಜಾನಪದ ಪರಿಷತ್ ಹಾಂಗೆ ಕೊಡಗು ಜಾನಪದ ಪರಿಷತ್‌ನವು ನಡ್ಸಿದ ಜಾನಪದ ಉತ್ಸವಕ್ಕೆ ಶ್ರೀ ರಾಮ ಯುವಕ ಸಂಘ ಚೆಂಬು, ಶ್ರೀ ಮಾಚಯ್ಯ ಎಸ್.ಪಿ ಸೋಮವಾರಪೇಟೆ, ಶ್ರೀ ವಿನೋದ್ ಭರಣಿ ಕಲಾತಂಡ ತಿತಿಮತಿ ತಂಡಂದ ನಡ್ದ, ಸಾಂಸ್ಕೃತಿಕ ಕಾರ್ಯಕ್ರಮನ ಅಕಾಡೆಮಿ ಪ್ರಾಯೋಜಿಸಿತ್.

ಮಡಿಕೇರಿ ಆಕಾಶವಾಣಿಲಿ ಪ್ರಸಾರ ಆಗ್‌ವ ಅರೆಭಾಷೆ ವಾರ್ತೆ ಸುದ್ದಿಜೊಂಪೆಗೆ ಮೂರ್ನಾಡ್ ಗೌಡ ಸಮಾಜ, ವಿರಾಜಪೇಟೆ ಗೌಡ ಸಮಾಜ, ಪಾರಾಣೆ ಗೌಡ ಸಮಾಜ, ಉಳುವಾರನ ಕುಟುಂಬಸ್ಥರ್, ಕಡ್ಲೇರ ಶ್ರೀಮತಿ ಯಶೋದ, ಕೊಟ್ಟಕೇರಿಯನ ಕುಟುಂಬಸ್ಥರ್ ಮತ್ತೆ ಮಡಿಕೇರಿ ಗೌಡ ಸಮಾಜ ಇವರ ಸಹಯೋಗಲಿ ಅಕಾಡೆಮಿ ಪ್ರಾಯೋಜಕತ್ವ ನೀಡಿಕಂಡ್ ಬರ್ತಾವುಟ್ಟು.

# ಅಕಾಡೆಮಿ ಸಹಯೋಗಲಿ ನಡ್ಸಿದ ಕಾರ್ಯಕ್ರಮಗ

## ಮೈಸೂರಲಿ –ಅರೆಭಾಷೆ ಐಸಿರಿ

2016 ಮೇ 14 ಮತ್ತೆ 15 ರಂದ್ ಮೈಸೂರ್‍ನ ಸ್ಕೌಟ್ಸ್ ಅಂಡ್ ಗೈಡ್ಸ್ ಮೈದಾನಲಿ ಈ ಕಾರ್ಯಕ್ರಮನ ಏರ್ಪಡ್ಸಿದ್ದೊ. ದಿನಾಂಕ 14 ರಂದ್ ಸಣ್ಣ ಮಕ್ಕಳಿಗೆ ಛದ್ಮವೇಸ , ಅರೆಬಾಸಿಕರ ಹಬ್ಬ ಹರಿದಿನದ ಬಗ್ಗೆ ತಪ್ಪಿಲ್ಲದೆ ಮಾತಾಡ್ದು, ಮೊದ್ವೆ ಶಾಸ್ತಗಳ ಕುರ್ತ್ ತಪ್ಪಿಲ್ಲದೆ ಮಾತಾಡ್ದು, ಸಾಂಸ್ಕೃತಿಕ ಉಡುಗೆ ತೊಡುಗೆಲಿ ನಡಿಗೆ ಪ್ರದರ್ಶನ. ಸ್ವರಚಿತ ಕವನ ಓದೋ ಸ್ಪರ್ಧೆ, ಕೂಡು ಕುಟುಂಬದ ತಮಾಸೆ ಸಂಗತಿಗ, ಏಕ ಪಾತ್ರ ಅಭಿನಯ, ಸೋಬಾನೆ, , ಕೋಲಾಟ ಈ ಸ್ಪರ್ಧೆಗಳ್ಲಿ ಬೇರೆ ಬೇರೆ ಕಡೆಂದ ಕಲಾತಂಡಗ ಬಂದ್ ಭಾಗವಹ್ಸಿದ್ದೊ.

ದಿನಾಂಕ :15 ರಂದ್ ನಡ್ದ ವಿಶೇಷ ಮೆರವಣಿಗೆಲಿ ಸಾಂಸ್ಕೃತಿಕ ಕಲಾತಂಡಗ, ಶ್ರೀ ಬೂದಿಯಪ್ಪ, ಶಿವಮೊಗ್ಗ ಇವರ ತಂಡಂದ ಡೊಳ್ಳು ಕುಣ್ತ, ಶ್ರೀ ಮೇಲುಗಿರಯ್ಯ ರಾಮನಗರ ಇವರ ತಂಡಂದ ಸೋಮನ ಕುಣ್ತ, ಶ್ರೀ ರಾಜೇಶ್ ಎಲ್.ಕೆ. ಪಾಂಡವಪುರ ಇವರ ತಂಡಂದ ಪೂಜಾ ಕುಣ್ತ , ಶ್ರೀ ನಿರಂಜನ್ ಮೂರ್ತಿ ಬೆಂಗಳೂರು ಇವರ ತಂಡಂದ ವೀರಗಾಸೆ, ಶ್ರೀ ಚೇತನ್ ಪುರಿಯಾ ಇವರ ತಂಡಂದ ಯಕ್ಷಗಾನ ಮತ್ತೆ ಸಿದ್ದವೇಷ, ಶ್ರೀ ಸಂಜೀವ ಕಾಸರಗೋಡು ಇವರ ತಂಡಂದ ಚಂಡೆ –ವಾಲಗ, ಶ್ರೀ ಚೆಣ್ಣಪ್ಪನವು ಅಪ್ಪಯ್ಯಗೌಡರ ವೇಷಭೂಷಣಲಿ ಕುದುರೆ ಮೇಲೆ ಮೆರವಣಿಗೆ, ಶ್ರೀ ಸದಾನಂದ ಅಜ್ಜಲ ಇವರ ತಂಡಂದ ಭೂತದ ಕೋಲ, ಶ್ರೀ ದೀಪಕ್ ಇವರ ತಂಡಂದ ಆಟಿ ಕಳಂಜ ಶಬ್ದ ಚಿತ್ರಗಳ ಸಹಿತ ಮೆರವಣಿಗೆ ಅರಮನೆ ಆಂಜನೇಯ ದೇವಸ್ಥಾನಂದ ಶುರು ಮಾಡಿ ಸ್ಕೌಟ್ಸ್ ಅಂಡ್ ಗೈಡ್ಸ್ ಮೈದಾನಕ್ಕೆ ಬಾತ್.

ದಿನಾಂಕ:14 ರಂದ್ ಜೋಗತಿ ನೃತ್ಯ ದಿನಾಂಕ: 15 ರಂದ್ ಶ್ರೀಮತಿ ಪ್ರಮಿಳಾ ಲೋಕೇಶರ ನೃತ್ಯ ನಿನಾದ ಕಡಬ ತಂಡಂದ ಹೆಜ್ಜೆಗಜ್ಜೆ ನಿನಾದದೊಳಗೆನುಟ್ಟು, ಶ್ರೀಮತಿ ಮಿಲನ ಭರತ್ ತಂಡಂದ ಗೌಡರ ಸಿರಿ ಸಂಸ್ಕೃತಿ ದರ್ಶನ, ಶ್ರೀ ಲವಿನ್ ಸುಳ್ಯ ತಂಡಂದ ಚೌರಿ ಆಟ, ಕೊಡಗು ಗೌಡ ಯುವ ವೇದಿಕೆ ತಂಡಂದ ಗುಂಪು ನೃತ್ಯ, ಅಯ್ಯಪ್ಪ ಯುವತಿ ಮಂಡಳಿ ತಂಡಂದ ಜಾನಪದ ನೃತ್ಯ , ಶ್ರೀ ಸತೀಶ್ ಇವರ ತಾಂಡವ ಅಕಾಡೆಮಿ ತಂಡಂದ ಗುಡ್ಡೆಮನೆ ಅಪಯ್ಯ ಗೌಡರ

ನೃತ್ಯ ರೂಪಕ ಹಿಂಗೆ ಸಾಂಸ್ಕೃತಿಕ ಪ್ರದರ್ಶನಗ ಜೋರಾಗಿ ನಡ್ತ್.

ಕಾರ್ಯಕ್ರಮದ ಉದ್ಘಾಟನೆನ ಕೊಡಗ್ ಮೈಸೂರು ಸಂಸದರ್ ಶ್ರೀ ಪ್ರತಾಪ ಸಿಂಹ ಮಾಡ್ದೊ, ಸಭಾಧ್ಯಕ್ಷತೆನ ಅಕಾಡೆಮಿ ಅಧ್ಯಕ್ಷ ಶ್ರೀ ಕೊಲ್ಯದ ಗಿರೀಶ್ ವಹಿಸಿದ್ದೊ. ಅಥಿತಿಗ ಆಗಿ ವಿಶ್ರಾಂತ ಉಪಕುಲಪತಿಗ ಶ್ರೀ ಚಿದಾನಂದ ಗೌಡ, ಸೈಂಟ್ ಫಿಲೋಮಿನಾ ಕಾಲೇಜು ಮೈಸೂರ್ನ ಪ್ರೊ.ಕೃಷ್ಣೇಗೌಡ, ಕೊಡಗು ಗೌಡ ಸಮಾಜ ಅಧ್ಯಕ್ಷರ್ ಶ್ರೀ ಕುದುಪಜೆ ಕೆ.ಕುಶಾಲಪ್ಪ ಅಥಿತಿಗ ಆಗಿದ್ದೊ. ಡಾ.ಚೇರಿಯಮನೆ ಬಿ.ರಾಮಚಂದ್ರ ಅಧ್ಯಕ್ಷತೆಲಿ ನಡ್ದ ವಿಚಾರಗೋಷ್ಠಿಲಿ ಅರೆಬಾಸೆ ಸಂಸ್ಕೃತಿಯ 'ಸಾಂಸ್ಕೃತಿಕ ಪಲ್ಲಟ'ಗಳ ಬಗ್ಗೆ ಪ್ರೊ.ಸೀತರಾಮ ಕೇವಳ, ಅರೆಬಾಸೆ 'ಸಂಸ್ಕೃತಿ ನಿರ್ಮಾಣಲಿ ಮಹಿಳೆಯರ ಪಾತ್ರ' ಬಗ್ಗೆ ಶ್ರೀಮತಿ ಚಂದ್ರಮತಿ ಸುಳ್ಯ, 'ಅರೆಬಾಸಿಕರ ನಂಬಿಕೆಗಳ ಹಿನ್ನೆಲೆ ಮತ್ತೆ ಅನನ್ಯತೆ' ಬಗ್ಗೆ ಶ್ರೀ ಪಟ್ಟಡ ಶಿವಕುಮಾರ್ ಉಪನ್ಯಾಸ ಮಾಡ್ದೊ. ಮುಕ್ತಾಯ ಜಂಬರಕ್ಕೆ ಕೇಂದ್ರ ಸರ್ಕಾರದ ಕ್ಷೇತ್ರ ಪ್ರಚಾರ ನಿರ್ದೇಶನಾಲಯದ ಸಹ ನಿರ್ದೇಶಕರ್ ಡಾ. ಟಿ.ಸಿ.ಪೂರ್ಣಿಮ, ಮೈಸೂರು ವಿಶ್ವ ವಿದ್ಯಾಲಯದ ಉಪಕುಲಪತಿಗ ಶ್ರೀ ರಂಗಪ್ಪ ಮೈಸೂರು, ನಗರಪಾಲಿಕೆ ಸದಸ್ಯರ್ ಶ್ರೀ ಚೆಲುವೆಗೌಡ, ನಿವೃತ್ತ ಪ್ರಾಂಶುಪಾಲರ್ ಡಾ.ಕಾನಡ್ಕ ಎ ಪದ್ಮಾಜಿ, ಡಾ.ಕಾಳಮನೆ ಆಶಾಕುಮಾರಿ, ಕೂಡಕಂಡಿ ಗೋಪಾಲ ಇವು ಉಪಸ್ಥಿತರಿದ್ದೊ. ಪರಿಶಿಷ್ಟ ಜಾತಿ– ಪಂಗಡ ಅನುದಾನಲಿ ಅಕಾಡೆಮಿ ಸಿದ್ಧಪಡ್ಸಿದ ಕಲಾವಿದರಾದ ಶ್ರೀ ನಾರಾಯಣ ಪರವ ಬಾಳಿಲ ಮತ್ತು ಶ್ರೀ ಮೇದಾರ ಅಯ್ಯಪ್ಪ, ಶ್ರೀ ರಾಜು.ಕೆ.ನಿಡುಗಣೆ ಕೊಡಗು ಇವರ ಸಾಕ್ಷ್ಯಚಿತ್ರಗಳ ಸಿ.ಡಿನ ಬಿಡ್‌ಗಡೆ ಮಾಡ್ದೊ. ಸುಮಾರ್ 3500ಕ್ಕೂ ಮೀರಿ ಭಾಷಾಭಿಮಾನಿಗ ಸಾಹಿತಿಗ ಭಾಗಿಯಾಗಿ ಕಾರ್ಯಕ್ರಮನ ಯಶಸ್ಸ್‌ಗೊಳ್ಸಿದೊ.

## ಮಡಿಕೇರಿಲಿ ಪಂಚಭಾಷ ಅಕಾಡೆಮಿಗಳ ಸಮ್ಮೇಲನ

2016 ಮೇ 24 ರಂದ್ ಮಡಿಕೇರಿನ ಕ್ರಿಸ್ಟಲ್ ಕೋರ್ಟ್ ಸಭಾಂಗಣಲಿ, ಕೊಂಕಣಿ, ಬ್ಯಾರಿ, ತುಳು, ಕೊಡವ, ಅರೆಭಾಷೆ ಈ ಪಂಚ ಅಕಾಡೆಮಿಗ ಒಟ್ಟಾಗಿ ಕಾರ್ಯಕ್ರಮ ನಡ್ಸಿದೊ. ಐದ್ ಅಕಾಡೆಮಿಗಳ ಸಂಸ್ಕೃತಿನ ಬಿಂಬಿಸುವಂಗೆ ಮಡಿಕೇರಿ ನಗರಲಿ ಮೆರವಣಿಗೆ, ಐದು ಅಕಾಡೆಮಿಗಳ ಸಾಂಸ್ಕೃತಿಕ ಕಾರ್ಯಕ್ರಮ, ಐದು ಭಾಷೆನ ಕವಿಗೋಷ್ಠಿ ಮತ್ತೆ ವಿಚಾರಗೋಷ್ಠಿಗಳ್ನ ಏರ್ಪಡಿಸಿದ್ದೊ. ಕವಿಗೋಷ್ಠಿಗೆ ಶ್ರೀಮತಿ ಶಿವದೇವಿ ಅವನೀಶ್ಚಂದ್ರ, ವಿಚಾರಗೋಷ್ಠಿಗೆ ಶ್ರೀ ಜ್ಞಾನೇಶ್ ಇವು ಅಕಾಡೆಮಿ ಪರವಾಗಿ ಭಾಗವಹಿಸಿದ್ದೊ ಕೊಡಗು ಗೌಡ ಯುವ ವೇದಿಕೆಂದ ಕೋಲಾಟ, ಮಹಿಳಾ ಒಕ್ಕೂಟ ಮಡಿಕೆರಿ, ಇವರ ತಂಡಂದ ಜಾನಪದ ನೃತ್ಯ ನಡ್ತ್. ಹಿರಿಯ ಬರಹಗಾರ, ಬಾಷಾ ತಜ್ಞ ನಾಡೋಜ ಡಾ. ಹಂ.ಪ.ನಾಗರಾಜಯ್ಯ ಕಾರ್ಯಕ್ರಮ ಉದ್ಘಾಟನೆ ಮಾಡ್ದೊ. ಕನ್ನಡ ಮತ್ತು ಸಂಸ್ಕೃತಿ ಇಲಾಖೆನ ಜಂಟಿ ನಿರ್ದೇಶಕರಾದ ಶ್ರೀ ಮಲ್ಲಿಕಾರ್ಜುನ ಸ್ವಾಮಿ, ಕನ್ನಡ ಸಾಹಿತ್ಯ ಪರಿಷತ್‌ಅಧ್ಯಕ್ಷರ್ ಶ್ರೀ ಲೋಕೇಶ್ ಸಾಗರ್, ಶಕ್ತಿ ದಿನಪತ್ರಿಕೆನ ಪ್ರಧಾನ ಸಂಪಾದಕರು ಶ್ರೀ ಜಿ.ರಾಜೇಂದ್ರ, ಕಾರ್ಯಕ್ರಮಲಿ ಉಪಸ್ಥಿತರಿದ್ದೊ. ಮುಕ್ತಾಯ ಸಮಾರಂಭಲಿ ಪುಸ್ತಕ ಬಿಡುಗಡೆ ಕಾರ್ಯಕ್ರಮ ನಡ್ತ್. ಅಕಾಡೆಮಿಂದ ಪುಸ್ತಕ ಪ್ರದರ್ಶನ ಮತ್ತೆ ಮಾರಾಟ ವ್ಯಸ್ಥೆನೂ ಮಾಡಿದ್ದೊ. ಉದ್ಘಾಟನಾ ಸಮಾರಂಭಲಿ ರಿಜಿಸ್ಟ್ರಾರ್ ಉಮರಬ್ಬನೊವು ಎಲ್ಲರನೂ ಸ್ವಾಗತಿಸಿದೊ.

# ಲೇಖಕರ ವಿಳಾಸ :

1. **ಅಂಜೇರಿರ ವಿಶು ರಾಘವಯ್ಯ**, ಕುಶಾಲನಗರ, ಕೊಡಗು, ಮೊ: 9631219341
2. **ಉದಯಕುಮಾರಿ ಚೆಂಬು**, ಮಾಳಿಗೆ ಮನೆ, ಪೂಜಾರಿಗದ್ದೆ, ಚೆಂಬು ಗ್ರಾಮ, ಬಾಲೆಂಬಿ ಅಂಚೆ, ಮಡಿಕೇರಿ ತಾಲೂಕು, ಮೊ: 9632900436
3. **ಲೀಲಾ ದಾಮೋದರ**, 'ಧಾತ್ರಿ' ವಲಯ ಅರಣ್ಯ ಕಚೇರಿ ಹತ್ತಿರ, ಗಾಂಧಿನಗರ, ಸುಳ್ಯ, ದ.ಕ 574239, ಮೊ: 9449451051
4. **ಎಂ.ಜಿ. ಕಾವೇರಮ್ಮ**, ನಿಸರ್ಗ, ಸುಳ್ಯ, ದ.ಕ – 574239, ಮೊ: 9448106685
5. **ಕೊಟ್ಟಕೇರಿಯನ ಲೀಲಾ ದಯಾನಂದ**, ಉಪ ಮಂಡಲ ಅಧಿಕಾರಿ, ಬಿ.ಎಸ್.ಎನ್.ಎಲ್, ಮಡಿಕೇರಿ
6. **ಉಳುವಾರನ ರೋಶನ್ ವಸಂತ್**, ಕಾಂತೂರು ಗ್ರಾಮ, ಮುರ್ನಾಡು ಅಂಚೆ, ಕೊಡಗು
7. **ಭವಾನಿಶಂಕರ ಅಡ್ತಲೆ**, ಕೆ.ವಿ.ಜಿ ಐ.ಟಿ.ಐ ಸುಳ್ಯ ದ.ಕ ಕುರುಂಜಿಭಾಗ್– 574327
8. **ಪೂಜಾರಿರ ಜಿ. ಮಾದಪ್ಪ**, ಅರುವತ್ತೊಕ್ಲು ಗ್ರಾಮ ಮತ್ತು ಅಂಚೆ, ಮಡಿಕೇರಿ, ಕೊಡಗು, ಮೊ: 8861862035
9. **ಕುತ್ಯಾಳ ನಾಗಪ್ಪ ಗೌಡ (ಕಿರಣ)**, ಕಿರಣ ಕುಟೀರ, ಸುಳ್ಯ, ದ.ಕ. 574239, ಮೊ: 9448297221, kngkirana@gmail.com
10. **ಗುತ್ತಿಮುಂಡನ ದೇವಿಕಾ ಗಿರೀಶ್**, ಗೌಳಿಬೀದಿ, ಮಡಿಕೇರಿ, ಕೊಡಗು
11. **ಮನೋಜ್ ಕುಡೆಕಲ್ಲು**, ಆಲೆಟ್ಟಿ ಗ್ರಾಮ ಮತ್ತು ಅಂಚೆ, ಸುಳ್ಯ ದ.ಕ, ಮೊ: 8105774518
12. **ವಿದ್ವಾನ್ ಟಿ.ಜಿ ಮುಡೂರು**, ಎಂ.ಎ, ಬಿ.ಎಡ್., ಪಂಜ ದ.ಕ.– 574232, ಮೊ: 9449324260
13. **ಯೋಗೀಶ ಹೊಸೊಳಿಕೆ**, ಗುತ್ತಿಗಾರು ಅಂಚೆ, ಸುಳ್ಯ ದ.ಕ.– 574218 ಮೊ: 9449576632
14. **ಕೊಕ್ಕಲೇ ಮಾಲಿನಿ ಮುತ್ತಪ್ಪ**, ಹೆರವನಾಡು ಗ್ರಾಮ, ಅಪ್ಪಂಗಳ ಅಂಚೆ, ಮಡಿಕೇರಿ, ಕೊಡಗು, ಮೊ. 9448907293, 9686118823

    Email: malinikcorg@gmail.com
15. **ಕಾಳೆಯಂಡ ತಂಗಮ್ಮ ಅಪ್ಪಚ್ಚು**, ಬಿಳಿಗೇರಿ ಗ್ರಾಮ & ಅಂಚೆ, ಮಡಿಕೇರಿ, ಕೊಡಗು

16. **ಶ್ರೀಮತಿ ತುಳಸಿ ದಯಪ್ರಸಾದ್, "ವನಸಿರಿ"** ಚೇಮುಳು, ಪಂಬೆತ್ತಾಡಿ, ಪಂಜ, ಸುಳ್ಯ ದ.ಕ.

17. **ಕು. ಕನ್ನಿಕಾ ಪ್ರಕಾಶ್ ಕೋರನ,** ಬಿನ್ ಕೋರನ ಪ್ರಕಾಶ್, ಮುರ್ನಾಡು ಅಂಚೆ, ಕೊಡಗು, ಮೊ: 8762933494

18. **ಶ್ರೀಮತಿ ಜಯಮ್ಮ ಚೆಟ್ಟಿಮಾಡ,** ಮೊಗರ್ಪಣೆ, ಸುಳ್ಯ ದ.ಕ-574239,
ಮೊ: 9902269844

19. **ಶ್ರೀಮತಿ ಸಂಗೀತಾ ರವಿರಾಜ್,** ಹೊಸೂರು ಮನೆ, ಬಾಲೆಂಬಿ ಅಂಚೆ, ಚೆಂಬು ಮಡಿಕೇರಿ – 574239, ಮೊ.ನಂ : 7259135346

20. **ಪದ್ಮನಾಭ ಪಾದೆ ಎನ್.,** ನಿವೃತ್ತ ಪ್ರಾಧ್ಯಾಪಕರು
ಪಂಜ ಸುಳ್ಯ ತಾಲೂಕು, ದ.ಕ. –574232 ಮೊ. : 9448843931

21. **ಡಾ. ಪೂವಪ್ಪ ಕಣಿಯೂರು,** ಸಹಪ್ರಾಧ್ಯಾಪಕರು, ನೆಹರೂ ಮೆಮೋರಿಯಲ್ ಕಾಲೇಜು, ಸುಳ್ಯ ದ.ಕ– 574327

22. **ಶ್ರೀ ಸಂಜೀವ ಕುದ್ಪಾಜೆ** ಸಹಾಯಕ ಪ್ರಾಧ್ಯಾಪಕರು,
ನೆಹರೂ ಮೆಮೋರಿಯಲ್ ಕಾಲೇಜು, ಸುಳ್ಯ ದ.ಕ– 574327

## ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ (2014)

ಸರಕಾರಿ ಅಧಿಸೂಚನೆ ಸಂಖ್ಯೆ: ಕಸಂವಾ 817 ಕಸಧ 2013; ದಿನಾಂಕ 13.08.2014

ಅಧ್ಯಕ್ಷರು:

**ಶ್ರೀ ಕೊಲ್ಯದ ಗಿರೀಶ್,** ಮದೆ ಗ್ರಾಮ, ಮದೆ ಅಂಚೆ, ಮಡಿಕೇರಿ ತಾಲೂಕ್ 571 201
ದೂ: 08272-236515 ಮೊಬೈಲ್ : 9448156599.

ರಿಜಿಸ್ಟ್ರಾರ್:

**ಶ್ರೀ ಉಮರಬ್ಬ,** ಎಂ.ಎಂ. ಮಂಜಿಲ್, ಈದಾಯತ್ ನಗರ, ಕೋಟೆಕಾರ್, ಮಂಗಳೂರು,
ಮೊಬೈಲ್ : 9481149135

ಅರ್ಥ ಸದಸ್ಯರು:

ಶ್ರೀ ಎಲ್.ಎನ್. ಕುಳ್ಳಯ್ಯ, ಸಹಾಯಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಮಡಿಕೇರಿ,

ಸದಸ್ಯರು :

**ಡಾ. ಪೂವಪ್ಪ ಕಣಿಯೂರು** ಸ್ಫೂರ್ತಿ 4ನೇ ಅಡ್ಡರಸ್ತೆ, ದಕ್ಷಿಣ ಬೀರಮಂಗಲ, ಚರ್ಚ್ ರೋಡು, ಸುಳ್ಯ ದ.ಕ. ದೂರವಾಣಿ : 08257-232885/9448984485, pkaniyoor@gmail.com

**ಡಾ. ಕೋರನ ಸರಸ್ವತಿ ಪ್ರಕಾಶ್** ಸಹ ಪ್ರಾಧ್ಯಾಪಕರು, ಸರಕಾರಿ ಪ್ರಥಮ ದರ್ಜೆ ಕಾಲೇಜು, ವಿರಾಜಪೇಟೆ, ಕೊಡಗು ಮೊಬೈಲ್ : 9483826271

**ಶ್ರೀ ಮೋಹನ್ ಸೋನ ಸೋಣಂಗೇರಿ** ನಡುಮನೆ, ಜಾಲ್ಸೂರು, ಸುಳ್ಯ ತಾಲೂಕು
ದ.ಕ.- 574239 ಮೊಬೈಲ್ : 9448791799

**ಶ್ರೀಮತಿ ಸಂಗೀತಾ ರವಿರಾಜ್,** ಹೊಸೂರು ಮನೆ, ಬಾಲೆಂಬಿ ಅಂಚೆ, ಚೆಂಬು,
ಮಡಿಕೇರಿ- 574234 ಮೊಬೈಲ್ 7259135346

**ಶ್ರೀ ಯಶವಂತ ಕುಡೆಕಲ್,** ಕುಂಬೆತ್ತಿ ಬನ, ದುಗ್ಗಲಡ್ಕ, ಸುಳ್ಯ ದ.ಕ. -574239
ಮೊಬೈಲ್ : 9481180519

**ಶ್ರೀ ವಸಂತ ಬಿ.ಸಿ.,** ಬಾಕಿಲ ಮನೆ, ಕಲ್ಮಕಾರು ಗ್ರಾಮ, ಸುಳ್ಯ ತಾಲೂಕು ದ.ಕ.
ಮೊಬೈಲ್ : 9449999354

**ಶ್ರೀ ಬೋಜಪ್ಪ ಗೌಡ ಎಂ.** ಮದುವೆ ಗದ್ದೆ, ಉಬರಡ್ಕ ಮಿತ್ತೂರು, ಸುಳ್ಯ ತಾಲೂಕು
ದ.ಕ.- 574248 ಮೊಬೈಲ್ : 7760782925

**ಶ್ರೀ ಸದಾನಂದ ಗೌಡ ಮಾವಜಿ,** ಮಂಡೆಕೋಲು, ಸುಳ್ಯ ತಾಲೂಕು ದ.ಕ.-574239
ಮೊಬೈಲ್ : 94481644638

**ಶ್ರೀ ಮೋಹನ್‌ದಾಸ್ ಮಂದ್ರೀರ,** ಹೊಸ್ಕೇರಿ ಗ್ರಾಮ, ಮರಗೋಡು, ಮಡಿಕೇರಿ,
ಮೊಬೈಲ್ : 9448720112

ಸಹಸದಸ್ಯರು:

**ಶ್ರೀ ಕುಡೆಕಲ್ ಸಂತೋಷ್,** ಹೆಮ್ಮತ್ತಾಳು ಗ್ರಾಮ, ಮುಕ್ಕಂದೂರು, ಮಡಿಕೇರಿ
ತಾಲೂಕು, ಕೊಡಗು ಮೊಬೈಲ್ : 9972538584, 8762110948

**ಶ್ರೀ ಕಾರ್ಯಪ್ಪ ಪಿ.ಎಸ್.,** ಪುಂಡಿಗದ್ದೆ, ಯೇನೇಕಲ್ ಗ್ರಾಮ, ಸುಳ್ಯ ತಾಲೂಕು ದ.ಕ.
ಮೊಬೈಲ್ : 9731197656

**ಶ್ರೀ ಅಣ್ಣಾಜಿ ಗೌಡ ಪೈಲೂರು ಮನೆ,** ಅಮರಮುಡ್ನೂರು ಗ್ರಾಮ, ಸುಳ್ಯ ತಾಲೂಕು
ದ.ಕ. - 574212 ಮೊಬೈಲ್ : 94488058748/9164401745



ಸಂಭ್ರಮದ ಐಸಿರಿಗೆ ಅಕಾಡೆಮಿ ರಿಜಿಸ್ಟ್ರಾರ್ ಶ್ರೀ ಉಮರಬ್ಬ ಅವರಿಂದ ಸ್ವಾಗತ



HINGARA Arebhashe Quarterly Volume - 1, Issue - 1
Date : 10-9-2016 Kodagu KARARB 00001 Price : 20/- Pages : 72



ತೈಲವರ್ಣ ಕಲಾಕೃತಿ

ಅರೆಭಾಷಿಕ ಸಂಸ್ಕೃತಿಯಲ್ಲಿ ಮದರಂಗಿ ಶಾಸ್ತ್ರ

Printed by **UMARABBA** on behalf of Registrar, Karnataka Arebhase Samskruthi Mathu Sahithya Academy, and Published by **UMARABBA** on behalf of Registrar, **Karnataka Arebhase Samskruthi Mathu Sahithya Academy**, on behalf of KARNATAKA AREBHASE SAMSKRUTHI MATHU SAHITHYA ACADEMY (name of Woner) and Printed at **SRI KRISHNA COMPUTERS & PRINTERS**, Pooja Arcade, Madikeri, Kodagu District. And Published at Karnataka Arebhase Samskruthi Mathu Sahithya Academy, Coffee Krupa Building, 1st Floor, Raja Seat Road, Madikeri, Kodagu District. Editor : UMARABBA